# ಚಂದಮಾಮ

ಸಂಸ್ಥಾಪಕರು: 'ಚಕ್ರಪಾಣಿ'
ಸಂಚಾಲಕರು: ನಾಗಿರೆಡ್ಡಿ

ಸಾಹಿತ್ಯ ಪಾಕದಲ್ಲಿ ಹೆಸರು ಪಡೆದ ಅನೇಕರು ಚಿತ್ರಕಾರರಾಗಿರುವುದೂ ಉಂಟು. ಇವೆರಡನ್ನೂ ಬಹಿರಂಗಪಡಿಸುವಂತೆ, ಚಂದಮಾಮದ ಮುಖಚಿತ್ರಕಾರರಾಗಿ ಬೆಳಗುವ ಶ್ರೀ ವಡ್ಡಾದಿ ಪಾಪಯ್ಯನವರಿದ್ದಾರೆ. ಅವರು ಸಾಹಿತ್ಯ ರಚನೆಯಲ್ಲಿ ಕೂಡಾ ಸಿದ್ಧಹಸ್ತರೆಂಬುದಕ್ಕೆ ನಾವು ಪ್ರಕಟಿಸಿದ 'ವಿಷ್ಣುಕಥೆ' ಧಾರಾವಾಹಿಯೇ ಸಾಕ್ಷಿ. ಈ ಮೊದಲಿನ 'ವಿಘ್ನೇಶ್ವರ' ಕಥಾವಾಹಿನಿಯನ್ನು ಕೂಡಾ ಬರೆದವರು ಅವರೇ. 'ವಿಷ್ಣುಕಥೆ' ಈ ಸಂಚಿಕೆಯಲ್ಲಿ ಮುಗಿಯುತ್ತದೆ. ಮುಂದಿನ ಸಂಚಿಕೆಯಲ್ಲಿ ಇನ್ನೊಂದು ಪುರಾಣ ಕಥೆಯ ಪ್ರಾರಂಭವನ್ನು ನೋಡುವಿರಿ.

## ಅಮರವಾಣಿ

**ಸ್ವೀಯಂ ತಪೋ ಸತೀರೂಪಂ, ಪಾಂಡಿತ್ಯಂ ತನಯಸ್ಯ ಚ**
**ಮೂಲಿಕಾ ಸ್ವಗೃಹೋತ್ಪನ್ನಾ ನ ಸ್ತುತ್ಯಾ ನೀತಿಕೋವಿದೈಃ**

ಸ್ವಂತ ತಪಸ್ಸನ್ನೂ, ಹೆಂಡತಿಯ ರೂಪವನ್ನೂ, ಮಗನ ಪಾಂಡಿತ್ಯವನ್ನೂ, ತನ್ನ ಹಿತ್ತಿಲಲ್ಲಿರುವ ಮೂಲಿಕೆಯನ್ನೂ ನೀತಿವಂತರು ನಾಲ್ವರ ಮುಂದೆ ಹೊಗಳರು.

ಸಂಪುಟ: ೨೪ ಜನವರಿ '೭೩ ಸಂಚಿಕೆ: ೧
ಬಿಡಿ ಪ್ರತಿ ರೂ. ೧-೦೦ :: ವಾರ್ಷಿಕ ಚಂದಾ ರೂ. ೧೪-೦೦





# ಮನೆಯ ಭದ್ರತೆ

ರಾಯನಕೇರಿ ಎಂಬ ಒಂದು ಗ್ರಾಮದಲ್ಲಿ ಶಿವಯ್ಯ ನೆಂಬೊಬ್ಬ ಗೃಹಸ್ಥನಿದ್ದನು. ಅವನಿಗೆ ಊರೊಳಗಿನ ನಡುಬೀದಿಯಲ್ಲಿ ಸುಂದರವೂ ದೊಡ್ಡದೂ ಆದೊಂದು ಮನೆ ಇದ್ದಿತು. ಅವನು ಒಳ್ಳೆಯ ವಯಸ್ಸಿನಲ್ಲಿದ್ದಾಗ ಬಹಳ ಕಷ್ಟಪಟ್ಟು ಶ್ರಮಿಸಿ ಸಂಪಾದಿಸಿದ ಹಣದಿಂದ, ಸ್ವಯಂ ತಾನೂ ಒಬ್ಬ ಆಳಾಗಿ ದುಡಿದು ಕಟ್ಟಿಸಿಕೊಂಡ ಮನೆಯದು. ಆ ಮನೆಯ ಪ್ರತಿ ಭಾಗಕ್ಕೂ ಅವನ ಬೆವರು ಸುರಿದಿತ್ತು. ಆದುದರಿಂದ ಆ ಮನೆಯನ್ನು ತನ್ನ ಆರನೇ ಪ್ರಾಣದಂತೆ ನೋಡಿಕೊಳ್ಳುತ್ತಿದ್ದನು.

ಒಂದು ದಿನ ಶಿವಯ್ಯನ ಹೆಂಡತಿ ಸುಂದರಮ್ಮ ಅವನೊಂದಿಗೆ, "ನಮ್ಮೂರಿನ ಕೆಲವರು ಒಂದಾಗಿ ಸೇರಿ ಕಾಶೀಯಾತ್ರೆಗೆ ಏರ್ಪಾಡು ಮಾಡಿಕೊಂಡಿದ್ದಾರೆ, ನಾಲ್ಕು ಪುಣ್ಯ ಕ್ಷೇತ್ರಗಳನ್ನು ತಿರುಗಿ, ನಾಲ್ಕಾರು ದೇವತೆಗಳ ಸೇವೆ ಮಾಡಿಬರಲು ಇಷ್ಟು ಒಳ್ಳೆಯ ಅವಕಾಶ ಮತ್ತೆ ಬಾರದು. ಜತೆಗೆ ಜನರಿರುವುದರಿಂದ ಪ್ರಯಾಣವೂ ಕಷ್ಟವಾಗದು. ಈ ಸಂದರ್ಭವನ್ನು ಬಿಡದೆ. ನಾವು ಕೂಡಾ ಹೊರಡೋಣವೆ ? " ಎಂದಳು.

ಶಿವಯ್ಯ ಬೇಸರದಿಂದ, "ಇಷ್ಟು ದೊಡ್ಡ ಮನೆಯನ್ನು ಹೀಗೆಯೇ ಬಿಟ್ಟು ಯಾತ್ರೆ ಹೋಗುವುದಂತೆ ಯಾತ್ರೆ ! ಕಾಶಿಗೆ ಹೋಗಿ ತಿರುಗಿ ಬರುವಾಗ ಕಡಿಮೆ ಅಂದರೆ ಆರು ತಿಂಗಳಾದೀತು. ಅಷ್ಟರವರೆಗೆ ಮನೆಯ ಭದ್ರತೆ ನೋಡುವುದು ಯಾರು ? " ಎಂದನು.

ಗಂಡ ಹೇಳಿದುದನ್ನು ಕೇಳಿ ಸುಂದರಮ್ಮ ಕೋಪದಿಂದ, "ನಿಮ್ಮ ಪ್ರಾಣಕ್ಕೂ ಈ ಮನೆಗೂ ಏನೋ ಅಂಟು ಹಚ್ಚಿದ ಹಾಗಿದೆ. ದೂರದಲ್ಲಿ ಉದ್ಯೋಗ ಮಾಡಿಕೊಂಡು ಅಲ್ಲಿಯೇ ಸ್ಥಿರಪಟ್ಟುಕೊಂಡಿರುವ ನಿಮ್ಮ ಮಗಂದಿರಿಗೆ ಈ ಮನೆಯ ಅವಶ್ಯವೇ ಇಲ್ಲ. ಅವರೇನೋ ತಮ್ಮ ಜತೇಲೇ ಬಂದು ಇರೀ ಅಂತ ನಮ್ಮನ್ನು ಒತ್ತಾಯಿಸುತ್ತಲೇ ಇದ್ದಾರೆ. ಈ ಮನೇನ ಮಾರಿ ಮಗಂದಿರೊಟ್ಟಿಗೆ ಇರೋಣವೆಂದರೆ ನಿಮ್ಮ ತಲೆಗೆ ಏರೋದೇ ಇಲ್ಲ. ಈಗ ಆ ಕೆಲಸ ನೀವು ಮಾಡಿಬಿಟ್ಟರೆ ಮನೆ ಏನಾಗುತ್ತೋ ಅಂತ ಚಿಂತೆಯೇ ಇರದು. ಬೇಕಾದಷ್ಟು ಹಣವೂ ಬರುವುದರಿಂದ ಯಾತ್ರೆಗಾಗಿ ಹಣಕ್ಕೋಸ್ಕರ ಪರದಾಡ ಬೇಕಾಗಿಯೂ ಇಲ್ಲ. ಯಾತ್ರೆ ಮುಗಿಸಿಕೊಂಡು

ಜೆ. ರತ್ನ



ಬಂದ ಮೇಲೆ ನಮ್ಮ ಮಗಂದಿರ ಜತೇಲೇ ಹೋಗಿ ಹಾಯಾಗಿ ಇದ್ದರಾಯಿತು" ಎಂದಳು.

"ಹೇಳಿದರೆ ನಿನಗೆ ಅರ್ಥವಾಗದು. ನಾನು ಬದುಕಿರುವಾಗ ಈ ಮನೇನ ಮಾರೋ ಮಾತೇ ಇಲ್ಲ" ಎಂದು ಶಿವಯ್ಯ ಒತ್ತಿ ಹೇಳಿ ಹೆಂಡತಿಯನ್ನು ಕಣ್ಣು ತಿರುಗಿಸಿ ನೋಡಿದನು.

ಆದರೂ ಸುಂದರಮ್ಮ ಪಟ್ಟುಬಿಡದೆ, "ಯಾವಾಗ ಎಲ್ಲಿಗೆ ಕರೆದುಕೊಂಡು ಹೋಗೀ ಅಂದರೂ ಮನೇ ಮನೇ ಅಂತ ಹೇಳುತ್ತಾ ಇದ್ದೀರಿ. ಕೈಕಾಲು ಗಟ್ಟಿ ಇರುವಾಗಲೇ ಇಂತಹ ಯಾತ್ರೆಗಳನ್ನು ಮುಗಿಸಿ ಸ್ವಲ್ಪಾದರೂ ಪುಣ್ಯ ಕಟ್ಟಿಕೊಳ್ಳಬೇಕೆಂದರೆ ನಿಮಗೆ ಅರ್ಥವಾಗುವುದಿಲ್ಲ. ಬೇಕಾದರೆ ನಾವು ಹಿಂದಿರುಗಿ ಬರುವವರೆಗೆ ಮನೇನ ಭದ್ರವಾಗಿ ನೋಡಲಿಕ್ಕೆ ನನ್ನ ತಮ್ಮನಿಲ್ಲವೇ? ನಿಮ್ಮ ಸೋದರಳಿಯನಿಲ್ಲವೇ? ಹೇಳಿದರೆ ಕೂಡದು ಅನ್ನುತ್ತಾರೆಯೇ?" ಎಂದಳು.

ಶಿವಯ್ಯನು ಹೆಂಡತಿಯನ್ನು ಸುಡುವಂತೆ ನೋಡುತ್ತ, "ಮನೆಗಿನೆ ಬಿಟ್ಟು ಹೋಗಬೇಕಾಗಿ ಬಂದರೆ ಬೀಗಹಾಕಿ ಹೋಗುತ್ತೇನೆಯೇ ಹೊರತು ಬಂಧುಗಳನ್ನು ಮಾತ್ರ ಮನೆಯೊಳಗೆ ಕಾಲಿಡಲು ಬಿಡಲಾರೆ" ಎಂದು ಏನೋ ಆಲೋಚನೆ ಬಂದವನ ಹಾಗೆ, "ಆಯಿತು. ನಿನ್ನ ಇಷ್ಟ ಪ್ರಕಾರವೇ ಕಾಶೀಯಾತ್ರೆಗೆ ಹೊರಡೋಣ. ಆಯಿತಷ್ಟೇ?" ಎಂದವನೇ, ಸೀದಾ ಬೀದಿಗಿಳಿದು ಎಲ್ಲಿಗೋ ಹೋದನು.

ಆಗ ಸುಂದರಮ್ಮನಿಗಾದ ಆನಂದ ಹೇಳತೀರದು.

ಶಿವಯ್ಯ ನೆಟ್ಟಗೆ ಸಾಹುಕಾರ ವರದಯ್ಯನ ಮನೆಗೆ ಹೋಗಿ ಮುಟ್ಟಿದನು. ತಾನು ಕಾಶೀಯಾತ್ರೆಗೆ ಹೋಗಲಿರುವುದರಿಂದ ತನ್ನ ಮನೆಯನ್ನು ಅಡವು ಹಾಕಿಕೊಂಡು, ತನಗೆ ಎರಡು ಸಾವಿರ ರೂಪಾಯಿ ಸಾಲ ಕೊಡಬೇಕೆಂದು ಸಾಹುಕಾರನನ್ನು ಕೇಳಿದನು ಶಿವಯ್ಯ.

ವರದಯ್ಯ ಸಾಹುಕಾರನು ತನ್ನೊಳಗೆ ಸಂತೋಷದಿಂದ ಉಕ್ಕುತ್ತ, ಮುಖದಲ್ಲಿ ಮಾತ್ರ ಬೇಸರ ವ್ಯಕ್ತಪಡಿಸಿ, "ಹೀಗೆ ಅಡವುಗಿಡವು ಅಂತ ಯಾಕೆ ಹೇಳ್ರಿ? ಒಡ್ಡಿ ದಂಡವಲ್ಲವೆ? ಮನೆಯನ್ನು ಮಾರಿಬಿಡಬಹುದಲ್ಲಾ? ನೀವು ಸರಿ ಅಂದರೆ ನಾಲ್ಕು ಮಂದಿ ದೊಡ್ಡ ಮನುಷ್ಯರನ್ನು ಕರೆಸಿ ಮನೆಗೆ ನ್ಯಾಯವಾದ ಬೆಲೆ ಕಟ್ಟಿಸುತ್ತೇನೆ" ಎಂದನು.

ಶಿವಯ್ಯನು ಹುಬ್ಬು ಗಂಟಿಕ್ಕಿಕೊಂಡು, "ಇಲ್ಲದ ಮಾತು ಬೇಡ, ಸಾಹುಕಾರ್ರೆ. ನನಗೆ ಬೇಕಾದ್ದು ಮನೆಯ ಮೇಲೆ ಸಾಲ. ಸಾಧ್ಯವಿಲ್ಲವೆಂದರೆ ಇನ್ನೊಂದು ಕಡೆಗೆ ಹೋಗಿ ಕೇಳುತ್ತೇನೆ" ಎಂದನು.

"ಸರಿ ನಿಮ್ಮಿಷ್ಟ. ಒಂದು ಸಂಗತಿ ಮಾತ್ರ ನೆನಪಿಟ್ಟುಕೊಳ್ಳಿ. ಕಾಶೀಯಾತ್ರೆಯಂತಹ ದೊಡ್ಡ ಕೆಲಸಕ್ಕೆ ತಲೆಹಾಕಿದ್ದೀರಿ. ಅಷ್ಟು ದೊಡ್ಡ ಮನೇನೇ ಅಡವು ಹಾಕ್ತೀರಿ. ಎರಡು ಸಾವಿರ ಯಾವ

ಮೂಲೆಗೆ ? ಬಡ್ಡಿ, ಶೇಕಡ ಹನ್ನೆರಡೇ ಸಾಕು. ಐದು ಸಾವಿರ ಬೇಕಾದರೂ ಕೊಡುತ್ತೇನೆ" ಎಂದನು ವರದಯ್ಯ.

ಹಾಗೆಯೇ ಕೊಡುವಂತೆ ಹೇಳಿದನು ಶಿವಯ್ಯ. ಅನಂತರ ಪತ್ರದಲ್ಲಿ ರುಜುಹಾಕಿ ಹಣವನ್ನೂ ಪಡೆದುಕೊಂಡನು.

ಅಲ್ಲಿಂದ ಹೊರಟ ಶಿವಯ್ಯ ತನ್ನ ಸೋದರಳಿಯ ನಾದ ರಂಗರಾಯನ ಮನೆಗೆ ಹೋಗಿ, "ಏನೋ ರಂಗ್ರಾಯಾ ! ಚೆನ್ನಾಗಿದ್ದೀಯಾ ? ಈ ಮಧ್ಯೆ ನಿನ್ನ ಗದ್ದೆಗೆ ಲಗತ್ತಾಗಿರುವ ಪಕ್ಕದ ಗದ್ದೆಗಳು ಮಾರಾಟಕ್ಕೆ ಬಂದಿದೆಯೆಂದು ಒಮ್ಮೆ ಹೇಳಿದಿಯಪ್ಪೆ ? ಅದನ್ನು ಕೊಂಡುಕೊಳ್ಳಲು ಸಾಹುಕಾರ ವರದಯ್ಯನ ಹತ್ತಿರ ಸಾಲ ತೆಗೆದುಕೊಳ್ಳಬೇಕೆಂತಲೂ ಹೇಳಿರುವೆ. ಅದೆಲ್ಲಾ ಅನುಕೂಲವಾಗಿ ಆಯಿತೇನು ?" ಎಂದು ಕೇಳಿದನು.

ರಂಗರಾಯನು ಚಿಂತೆಯ ಮುಖದಿಂದ, "ಅನು ಕೂಲವಾಗಿದ್ದರೆ ನಿಮ್ಮ ಹತ್ತಿರ ಹೇಳದಿರುತ್ತಿದ್ದನೇ ಮಾವಯ್ಯಾ ? ಆ ಸಾಹುಕಾರ ಹಾಗೆಲ್ಲಾ ಸುಲಭ ದಲ್ಲಿ ಸಾಲ ಕೊಡುತ್ತಾನೆಯೆ ? ಶೇಕಡಾ ಇಪ್ಪತ್ನಾಲ್ಕು ಬಡ್ಡಿಯಂತೆ. ಏನು ಮಾಡುವುದಪ್ಪಾ ಅಂತ ಆಲೋಚಿಸಿಕೊಂಡೇ ಇದ್ದೇನೆ" ಎಂದನು.

"ಹಾಗೇನು ? ಹಾಗಾದರೆ ಈ ಐದು ಸಾವಿರ ತೆಗೆದುಕೋ. ನಾನೂ ನಿನ್ನ ಅತ್ತೆಯೂ ಕಾಶೀ ಯಾತ್ರೆಗೆ ಹೋಗಿ ಬರುತ್ತೇವೆ. ನಾನು ಹಿಂದಿರುಗಿ ಬಂದ ಮೇಲೆ ಹನ್ನೆರಡರ ಬಡ್ಡಿ ಕೂಡಿಸಿ ಈ ಐದು ಸಾವಿರ ನನಗೆ ತಿರುಗಿ ಕೊಡಬೇಕು" ಎಂದು ಶಿವಯ್ಯನು ರಂಗರಾಯನಿಗೆ ಆ ಹಣವನ್ನು ಕೊಟ್ಟನು. ಬಹಳ ಸಂತೋಷವಾಯಿತು ರಂಗ ರಾಯನಿಗೆ.

ಇಷ್ಟು ಮಾಡಿ ಶಿವಯ್ಯನು ಮನೆಗೆ ಬಂದ ಕೂಡಲೇ. ಹೆಂಡತಿಯನ್ನು ಕರೆದು, ಕಾಶೀ ಯಾತ್ರೆಗೆ



ಹೊರಡಲು ಸಿದ್ಧಪಡಿಸುವಂತೆ ಹೇಳಿದನು. ಅವಳು ಗಂಡನ ಮುಖವನ್ನು ಏನೋ ಅನುಮಾನದಿಂದ ನೋಡುತ್ತ, "ಯಾತ್ರೆಗೆ ಆಗತ್ಯವಾದ ಹಣವನ್ನು ಹೇಗೆ ಕೂಡಿಸಿದ್ದೀರಿ? ಮನೆ ನೋಡಿಕೊಳ್ಳಲು ಯಾರನ್ನು ಏರ್ಪಡಿಸಿದ್ದೀರಿ ?" ಎಂದು ಕೇಳಿದಳು.

"ಪ್ರತಿ ವಿಷಯವನ್ನೂ ನಿನಗೆ ಹೇಳಬೇಕೇನು ? ನಾನು ಏನು ಮಾಡಿದರೂ ಚೆನ್ನಾಗಿ ಆಲೋಚಿ ಸಿಯೇ ಮಾಡೋದು." ಎಂದಷ್ಟೇ ಹೇಳಿ ಶಿವಯ್ಯನು ಅತ್ತ ಹೋಗಿಬಿಟ್ಟನು.

ಆ ಮೇಲೆ ಒಂದು ವಾರದಿನಗಳಲ್ಲಿ ಆ ದಂಪತಿ ಗಳು ಉಳಿದ ಯಾತ್ರಿಕರೊಂದಿಗೆ ಕೂಡಿ ಕಾಶಿಗೆ ಪ್ರಯಾಣ ಮಾಡಿದರು.

ಮುಂದೆ ಆರು ತಿಂಗಳು ಕಳೆಯಿತು. ಶಿವಯ್ಯನೂ, ಸುಂದರಮ್ಮನೂ ಯಾತ್ರೆಯಿಂದ ತಿರಿಗಿ ಬಂದರು. ಸುಂದರಮ್ಮ ಗಂಡನಿಗೆ ಮನೆಯನ್ನೆಲ್ಲಾ ತಿರುಗಿ ತೋರಿಸುತ್ತ, "ಆರು ತಿಂಗಳಿಂದ ಇದು ಮನುಷ್ಯ

ರಿಲ್ಲದ ಮನೆ ಅಂದರೆ ಯಾರಾದರೂ ನಂಬುವರೆ? ಮನೆ ಕನ್ನಡಿಯ ಹಾಗಿದೆ. ಎಲ್ಲಿಯೂ ಒಂದು ಚೂರು ಧೂಳೋ ಕಸವೋ ಇಲ್ಲ. ನೀರು ಹೊಯ್ಯುವವರಿಲ್ಲದೆ ಹಿತ್ತಲಿನ ಮರಗಿಡಗಳು ಒಣಗಿಹೋದುವೇನೋ ಅಂದುಕೊಂಡೆ, ಆದರೆ ಎಲ್ಲಾ ಬಹು ಚೆನ್ನಾಗಿವೆ." ಎಂದಳು ಆಶ್ಚರ್ಯದಿಂದ.

ಶಿವಯ್ಯ ಮುಗುಳು ನಗುತ್ತ, "ಇದೆಲ್ಲಾ ಆ ಸಾಹುಕಾರ ವರದಯ್ಯನ ದಯೆ!" ಎಂದನು.

ಸುಂದರಮ್ಮ ಬೆರಗಾಗಿ, "ಮನೆಯನ್ನು ಇಷ್ಟು ಭದ್ರವಾಗಿ ಕಾಪಾಡುವ ಅಗತ್ಯ ಆ ಸಾಹುಕಾರನಿಗೆ ಏಕೆ ಬಂತು?" ಎಂದಳು.

"ಅದಕ್ಕೆ ಬಲವಾದ ಕಾರಣವೇ ಇದೆ. ನಾವೂ ಮುದುಕರಾಗಿ ಹೋಗಿದ್ದೇವೆ, ಹೌದಾ? ಎಂದೋ ಒಂದು ದಿನ ಮಗಂದಿರ ಬಳಿಗೆ ಹೋಗುತ್ತೇವೆಂದು ಅಂದುಕೊಳ್ಳುತ್ತಾರೆ. ಆಗ ಸ್ವಲ್ಪ ಹೆಚ್ಚು ಬೆಲೆಯಾದರೂ ಕೊಟ್ಟು ಈ ಮನೆಯನ್ನು ತಾನೇ ಕೊಂಡುಕೊಳ್ಳಬಹುದೆಂದು ಸಾಹುಕಾರನಿಗೆ ಆಶೆ. ಅದಕ್ಕೇ ನಾನು ಎರಡು ಸಾವಿರ ಕೇಳಿದರೆ ಐದು ಸಾವಿರ ಕೊಟ್ಟಿದ್ದಾನೆ, ಈ ಮನೇನ ಅಡವು ಹಾಕಿಸಿಕೊಂಡು ಬಹುಶಃ ನಾವು ಕಾಶಿಯಿಂದ ತಿರುಗಿ ಬರಲಿಕ್ಕಿಲ್ಲ ಅಂದುಕೊಂಡಿದ್ದಾನು. ಬಂದರೂ ಅಷ್ಟು ದೊಡ್ಡ ಸಾಲ ಕೊಟ್ಟು ತೀರಿಸಲಾರೆನೆಂದೂ ಅಂದುಕೊಂಡಿರಬಹುದು. ಇದನ್ನೆಲ್ಲಾ ನಾನು ಊಹಿಸಿಕೊಂಡೇ ಮನೆಯನ್ನು ಭದ್ರವಾಗಿ ನೋಡಲು ವರದಯ್ಯನಿಗಿಂತ ಸರಿಯಾದವರು ಇಲ್ಲವೆಂದು ನಿಶ್ಚಯಿಸಿ, ಬೀಗದ ಕೈ ಅವನ ಕೈಗೇ ಕೊಟ್ಟಿದ್ದೆ." ಎಂದನು ಶಿವಯ್ಯ ನಗುತ್ತಾ.

"ವರದಯ್ಯ ಸಾಹುಕಾರನ ಕುಟಿಲ ಬುದ್ಧಿ ಸರಿಯೆ. ಮತ್ತೆ ಅಷ್ಟು ದೊಡ್ಡ ಸಾಲಾನ ಹೇಗೆ ಕೊಟ್ಟು ತೀರಿಸುತ್ತೀರಿ?" ಎಂದು ಕೇಳಿದಳು ಸುಂದರಮ್ಮ.

"ಅವನ ಕೈಯಿಂದ ತೆಗೆದುಕೊಂಡ ಹಣದಲ್ಲಿ ಒಂದು ಕಾಸು ಕೂಡಾ ಯಾತ್ರೆಗೆ ಖರ್ಚು ಮಾಡಲಿಲ್ಲ. ನಮ್ಮ ಕಷ್ಟಾರ್ಜಿತದಿಂದ ಸೇರಿಸಿಟ್ಟ ಹಣದಲ್ಲೇ ನಮ್ಮ ಕಾಶೀಯಾತ್ರೆಯಾಗಿದೆ. ಆ ಐದು ಸಾವಿರವನ್ನು ಹಣದ ಅಗತ್ಯವಿದ್ದ ನನ್ನ ಸೋದರ ಅಳಿಯ ರಂಗರಾಯನಿಗೇ ಕೊಟ್ಟೆ. ನಾಳೆ ಹೋಗಿ ಅವನಿಂದ ಆ ಹಣ ತೆಗೆದುಕೊಂಡು ಸಾಹುಕಾರನಿಗೆ ಕೊಟ್ಟು ಅಡವು ಬಿಡಿಸಿಕೊಂಡು ಬಿಡುತ್ತೇನೆ. ರಂಗರಾಯನಿಗೆ ಆರು ತಿಂಗಳ ಅವಧಿ ಹೇಳಿಯೇ ಹಣ ಕೊಟ್ಟಿದ್ದು" ಎಂದನು ಶಿವಯ್ಯ ಹೆಮ್ಮೆಯಿಂದ.

ಕೇವಲ ಮನೆಯ ಭದ್ರತೆಗಾಗಿ ಇಷ್ಟು ದೊಡ್ಡ ನಾಟಕವಾಡಿದ ತನ್ನ ಗಂಡನ ಬುದ್ಧಿವಂತಿಕೆಯನ್ನು ನೋಡಿ ಸುಂದರಮ್ಮ ತುಂಬ ಮೆಚ್ಚಿಕೊಂಡಳು.






## ೨

[ ಮಾಹಿಷ್ಮತೀ ರಾಜನಾದ ಯಶೋವರ್ಧನನು ತನ್ನ ಇಬ್ಬರು ಕುಮಾರರಲ್ಲಿ ಚಿಕ್ಕವನಾದ ಗುಣವರ್ಧನನಿಗೆ ಪಟ್ಟಾಭಿಷೇಕ ಮಾಡಬೇಕೆಂದು ನಿಶ್ಚಯಿಸಿದನು. ಇದಕ್ಕೆ ವೀರಪುರದ ಸಾಮಂತನಾದ ಸೂರ್ಯವರ್ಮನು ವ್ಯತಿರೇಕವಾಗಿದ್ದನು. ಸರ್ಪಕೇತು ಎಂಬ ಸಾಮಂತನು ಗುಣವರ್ಧನನೊಂದಿಗೆ ಸೇರಿ ತಂತ್ರ ಮಾಡಿ ಸೂರ್ಯ ವರ್ಮನನ್ನು ಕೊಲೆ ಮಾಡಲು ಕಾಡಿನಲ್ಲಿ ಹೊಂಚು ಹಾಕಿ, ಥಕ್ಕನೆ ಮೇಲೆ ಬಿದ್ದನು—ಇನ್ನು ಓದಿ ]

ತಾನು ಈಗ ಶತ್ರುಗಳ ಭಯಂಕರವಾದ ವ್ಯೂಹದೊಳಗೆ ಸಿಕ್ಕಿಬಿದ್ದೆನೆಂದು ಸೂರ್ಯವರ್ಮನಿಗೆ ಆಗಲೇ ಗೊತ್ತಾಯಿತು. ಆ ಶತ್ರುಗಳು ಯಾರೆಂತಲೂ ತಿಳಿದುಬಿಟ್ಟಿತು. ಅಷ್ಟರಲ್ಲಿ ಸ್ಪಷ್ಟವಾಗಿ ಕೂಗುವ ಶಬ್ದ, ಆ ಶತ್ರುಗಳ ಗುಂಪಿನಿಂದ ಎತ್ತರವಾದ ಸ್ವರದಲ್ಲಿ, "ಕಡಿಯಿರಿ! ಕೊಲ್ಲಿರಿ! ಸೂರ್ಯ ವರ್ಮನು ಪ್ರಾಣದೊಂದಿಗೆ ತಪ್ಪಿಸಿಕೊಂಡು ಹೋದರೆ ನೀವಾರೂ ಉಳಿಯಲಾರಿರಿ! ಆದ್ದರಿಂದ ಅವನನ್ನು ಕೊಲ್ಲಲೇಬೇಕು" ಎಂಬ ಮಾತುಗಳು ಸೂರ್ಯವರ್ಮನಿಗೆ ಕೇಳಿಸಿತು. ಸೂರ್ಯವರ್ಮನ ಕೈಯಲ್ಲಿದ್ದ ಮೃತ್ಯುವಿನ ನಾಲಗೆಯಂತಹ ದೀರ್ಘವಾದ ಕೃಪಾಣವು ಗಾಳಿಯಲ್ಲಿ ಚಕ್ರದಂತೆ ಸುತ್ತುತ್ತಿದ್ದಿತು. ಅದರ ಸುಯ್ಂ ಸುಯ್ಂ ಸುಳಿ ಶಬ್ದವು ಗಾಳಿಯನ್ನು ಸೀಳುತ್ತಿದ್ದಿತು. ಆದರಿಂದ ಒಂದೇ ಸಾರಿಗೆ ಇದಿರಿನಲ್ಲಿದ್ದ ಒಬ್ಬ ಸೈನಿಕನ ತಲೆಯೂ, ಮತ್ತೊಬ್ಬನ ಕೈಯೂ ತುಂಡಾಗಿ ನೆಲಕ್ಕೆ ಬಿದ್ದುವು.

ಅದೇ ಸಮಯದಲ್ಲಿ ಮತ್ತೆ ನಾಲ್ವರು ಶತ್ರು ಸೈನಿಕರು ಅವನನ್ನು ಮುತ್ತಿಬಿಟ್ಟರು. ಸರ್ಪಕೇತು, "ಹಾ! ಬಿಡಬೇಡಿ! ಹೊಡೆಯಿರಿ! ಕುತ್ತಿಗೆಗೇ ಗುರಿ ಇಡಿರಿ! ಕಡಿದು ಇನಾಂ ಪಡೆಯಿರಿ!"



ಎಂದು ಕರ್ಣಕಠೋರವಾಗಿ ಕೂಗಿ ಅಡಿಗಡಿಗೂ ಕೊಲೆಗಾರನಂತೆ ಅಬ್ಬರಿ ಮಾಡಿಕೊಂಡೇ ಇದ್ದನು.

ತನಗೆ ಸಾವು ತಪ್ಪದೆಂದು ಶತ್ರು ಸೈನಿಕರ ರಾಶಿಯನ್ನು ನೋಡಿ ಸೂರ್ಯವರ್ಮನಿಗೆ ಗೊತ್ತಾಯಿತು. ಆಗ ಅವನ ಮನಸ್ಸಿಗೆ ತನ್ನ ಕುಮಾರ ಚಂದ್ರವರ್ಮನು ನೆನಪಿಗೆ ಬಂದನು. ತನ್ನ ಮರಣದ ನಂತರ ಕ್ರೂರನಾದ ಸರ್ಪಕೇತು ತನ್ನ ಸಂಸ್ಥಾನವನ್ನು ಆಕ್ರಮಿಸುತ್ತಾನೆ. ಇದು ಈವರೆಗೂ ತನ್ನ ಮಗನಿಗೆ ಸ್ವಲ್ಪವೂ ತಿಳಿಯದು. ತಕ್ಕ ಜಾಗ್ರತೆ ಯಲ್ಲಿರುವಂತೆ ಮುಂದಾಗಿ ಅವನಿಗೆ ತಿಳಿದರೆ ಒಳ್ಳೆಯ ದಿತ್ತು. ಹೇಗೆ ತಿಳಿದೀತು ? ಯಾರು ತಿಳಿಸು ತ್ತಾರೆ ? ಹೀಗೆ ಚಡಪಡಿಸುತ್ತಾ, "ಸುಬಾಹೂ ! ಸುಬಾಹೂ !" ಎಂದು ಕೂಗಿ ಕೂಗಿ ಕರೆಯುತ್ತಾ ಸೂರ್ಯವರ್ಮನು ಶತ್ರು ಅಶ್ವಿಕರಲ್ಲಿ ಒಬ್ಬನನ್ನು ತನ್ನ ಕತ್ತಿಯಿಂದ ಸೀಳಿದನು. ಅದೇ ವೇಗದಲ್ಲಿ ಮತ್ತೊಬ್ಬನ ಕುದುರೆಯ ಗುಂಡಿಗೆಯನ್ನು ತಿವಿದನು. ಅವರೊಂದಿಗೆ ತನ್ನ ಕುದುರೆಯನ್ನು ಹಿಂದಕ್ಕೆ ನೆಗೆಸು ವಾಗ, ಪಕ್ಕದಲ್ಲಿದ್ದ ಇನ್ನೊಬ್ಬ ಶತ್ರು ಕೂಡಾ ನೆಲಕ್ಕುರುಳಿದನು.

ಆಗಲೇ ದೂರದಿಂದ-"ಓ ! ಓ ! ಪ್ರಭೂ ! ಇದೋ ಇಲ್ಲೇ ಇದ್ದೇನೆ ! ಬಂದೆ ಬಂದೆ ! ನನ್ನ ಹೆಣ ಬಿದ್ದ ಹೊರತು ನೀವು ಬೀಳಲಾರಿರಿ !" ಎಂದು ಪ್ರತ್ಯುತ್ತರವೂ ಕೇಳಿಬಂತು.

"ಇಲ್ಲಿಗೆ ಬರಬೇಡವೋ ಸುಬಾಹೂ ! ನನ್ನ ಚಿಂತೆ ಬಿಡು ! ವೀರಪುರಕ್ಕೆ ಓಡು. ಚಂದ್ರವರ್ಮ ನೊಂದಿಗೆ..." ಎಂದು ಸೂರ್ಯವರ್ಮನು ಮಾತು ಮುಗಿಸುವುದಕ್ಕೆ ಮೊದಲೇ ಕುದುರೆಯ ಮೇಲಿನಿಂದ ನೆಲಕ್ಕೆ ಉರುಳಿಬಿದ್ದನು. ಹಿಂದಿನಿಂದ ಅವನ ಬೆನ್ನಿಗೆ ಶತ್ರು ಸೈನಿಕನ ಕತ್ತಿ ಪ್ರವೇಶಿಸಿತ್ತು. "ಹಾ !" ಎಂದು ಅಂತ್ಯಾರ್ತನಾದದೊಂದಿಗೆ ಅವನು ಕೆಳಗೆ ಬೀಳುವಾಗ, ಮತ್ತೆ ಕೆಲವು ಕತ್ತಿಗಳು ಅವನ ಶರೀರವನ್ನು ಇರಿದುವು. ಶತ್ರುಗಳ ಉತ್ಸಾಹ ಕೋಲಾಹಲ ಧ್ವನಿ !

"ಅಗೋಗೊ ! ಒಬ್ಬನು ಓಡಿಹೋಗುತ್ತಿದ್ದಾನೆ. ಅವನನ್ನು ಅಡ್ಡಗಟ್ಟಿರಿ ! ಕೊಲ್ಲಿರಿ. ಈ ಸುದ್ದಿ ಮುಂದಾಗಿ ವೀರಪುರಕ್ಕೆ ತಿಳಿಯಕೂಡದು !" ಎಂದು ಸರ್ಪಕೇತು ಪಿಶಾಚಿಯಂತೆ ಕೂಗಿದನು. ಕೂಡಲೇ ನಾಲ್ಕೈದು ಮಂದಿ ಅಶ್ವಿಕರು ಸುಬಾಹು ವಿನ ಬೆಂಬತ್ತಿ ಓಡಿದರು.

ತನ್ನ ಪ್ರಭುವನ್ನು ರಕ್ಷಿಸುವುದು ಸಾಧ್ಯವಾಗು ವಂತಿಲ್ಲವೆಂದು ತಿಳಿದ ಕೂಡಲೇ, ಸುಬಾಹು ಅಲ್ಲಿಂದ ಮಿಂಚಿನ ವೇಗದಲ್ಲಿ ಓಡಿ, ಇಲ್ಲಿ ನಡೆದ ಘೋರವನ್ನು ಮುಂದಾಗಿ ಚಂದ್ರವರ್ಮನೊಂದಿಗೆ ಹೇಳಬೇಕೆಂದುಕೊಂಡನು. ಆಗಲೇ ಸೂರ್ಯ ವರ್ಮನ ಎಚ್ಚರಿಕೆಯ ಕೂಗೂ ಅವನ ಕಿವಿಗೆ ಬಿತ್ತು. ಆ ಕ್ಷಣದಲ್ಲೇ ಎಚ್ಚರಕ್ಕೆ ಬಂದ ಸುಬಾಹು ತನ್ನ ಕುದುರೆಯನ್ನು ಶತ್ರು ಅಶ್ವಿಕರ ಮಧ್ಯದಿಂದ



ಬದಿಗೆ ಹಾರಿಸಿ, ಗುಡ್ಡಗಾಡುಗಳ ದಾರಿಯಲ್ಲದ ದಾರಿಗಳನ್ನು ಹಿಡಿದು ಓಡಿಸಿಕೊಂಡು ಹೋದನು. ಸೂರ್ಯವರ್ಮನ ಮರಣವೇದನೆ ಅವನನ್ನು ಧೃತಿಗೆಡಿಸಿದರೂ ಕೈಕಾಲುಗೆಡದೆ ತಪ್ಪಿಸಿಕೊಂಡನು. ಪ್ರಭುವಿನ ಅಂತ್ಯೇಚ್ಛೆ ಅವನ ಕಿವಿಯಲ್ಲಿ ರಿಂಗಣಿಸುತ್ತಿತ್ತು.

ಕುದುರೆ ಅತಿವೇಗವಾಗಿ ಓಡುತ್ತಿತ್ತು. ಅವನು ವೀರಪುರವನ್ನು ಸೇರಬೇಕಾದರೆ ಗುಡ್ಡದ ಮೇಲಿನ ಸುತ್ತುದಾರಿ ಹಿಡಿದು ಹೋಗಬೇಕು. ಅವನೀಗ ದಾರಿಯಲ್ಲದ ದಾರಿಯನ್ನೇ ಹಿಡಿದಿದ್ದನು. ದಿಕ್ಕು ಮಾತ್ರ ತಪ್ಪಿರಲಿಲ್ಲ. ಅದು ಬಹಳ ಇಕ್ಕಟ್ಟಾದ ಮಾರ್ಗ. ಎರಡು ಕುದುರೆಗಳು ಮಾತ್ರ ಇದಿರು ಬದಿರಾಗಿ ಬಂದು ಪರಸ್ಪರ ದಾಟಿಕೊಳ್ಳಬಹುದು.

ಸುಬಾಹು ಕುದುರೆಯನ್ನು ಗುಡ್ಡದ ಮೇಲೆ ಹತ್ತಿಸುತ್ತಾ, ಒಮ್ಮೆ ಹಿಂದಿರುಗಿ ನೋಡಿದನು. ಅವನನ್ನು ಅನುಸರಿಸುವ ಶತ್ರು ಅಶ್ವಿಕರು ಒಬ್ಬರ ಹಿಂದೊಬ್ಬರಾಗಿ ಇಕ್ಕಟ್ಟಾದ ದಾರಿಯಲ್ಲಿ ಗುಡ್ಡ ಏರಿ ಬರುತ್ತಿದ್ದರು. ಅವನು ಓಡುವ ದಾರಿ ಅವರಿಗೆ ಗೊತ್ತಾದ ಹಾಗಿದೆ.

ಶತ್ರು ಸೈನಿಕರಿಗೂ ಸುಬಾಹುವಿಗೂ ನಡುವೆ ಇರುವ ದೂರವು ಬಾಣದೇಟಿಗೆ ಸಿಗುವಷ್ಟಿದ್ದಿತು. ತನಗೂ ಶತ್ರುಗಳಿಗೂ ಇರುವ ದೂರವು ಇನ್ನಷ್ಟು ಹೆಚ್ಚು ದೂರವಿರುವುದೇ ಒಳ್ಳೆಯದೆನಿಸಿತು ಸುಬಾಹುವಿಗೆ. ಇಲ್ಲದೆ ಹೋದರೆ ಶತ್ರುಗಳ ಬಾಣಕ್ಕೆ ತಾನು ಎರೆಯಾಗಬೇಕಾದೀತು ! ಆದಕ್ಕಾಗಿ ಅವನು ಹೆದರದಿದ್ದರೂ ಪ್ರಭುವಿನ ಇಚ್ಛೆ ನೆರವೇರಲಾರದಷ್ಟೆ ?

ಅವನು ಹೀಗೆ ಊಹಿಸುತ್ತಿದ್ದಂತೆಯೇ ರಿವ್ವನೆ ಒಂದು ಬಾಣ ಬಂದೇ ಬಂದಿತು. ಪುಣ್ಯಕಾಲ ! ಅದು ಗುರಿತಪ್ಪಿ ಅವನ ಹಿಂದೆ ತುಸುದೂರದಲ್ಲಿದ್ದ ಒಂದು ಬಂಡೆಗೆ ತಗಲಿ ಎರಡು ತುಂಡುಗಳಾಗಿ ಹೋಯಿತು.

ಸುಬಾಹು ತನ್ನ ಕುದುರೆಯನ್ನು ಇನ್ನಷ್ಟು ವೇಗವಾಗಿ ಓಡಿಸಲಾರಂಭಿಸಿದನು. ಹಿಂದಿನಿಂದ ರಿವ್ವು ರಿವ್ವೆಂಬ ಬಾಣಗಳ ಸಪ್ಪಳವೂ, ಕೂಗುಗಳೂ ಕೇಳಿಕೊಂಡೇ ಇದ್ದುವು.

ಸ್ವಲ್ಪ ಹೊತ್ತಿನ ಮೇಲೆ ಅವನು ಹಿಂದಿರುಗಿ ನೋಡಿದನು. ಆಗ ವಕ್ರವಕ್ರವಾದ ಗುಡ್ಡಗಾಡು ದಾರಿಯಲ್ಲಿ ಶತ್ರು ಸೈನಿಕರಿಗೂ ಅವನಿಗೂ ಇರುವ ದೂರವು ಇನ್ನಷ್ಟು ಹೆಚ್ಚಾಗಿತ್ತು. ಆದರೆ ಶತ್ರುಗಳು ಬಿಡುವ ಹಾಗೆ ಕಾಣುವುದಿಲ್ಲ. ಅಂತಹ ಕಷ್ಟದ ದಾರಿಯಲ್ಲಿ ಕೂಡಾ ಬಿಡದೆ ಕುದುರೆಗಳನ್ನು ನಡೆಸಿಕೊಂಡೇ ಇದ್ದಾರೆ. ತಾನೀಗ ಬೇರೇನೋ ಉಪಾಯ ಮಾಡಬೇಕೆನಿಸಿತು ಸುಬಾಹುವಿಗೆ.

ಗುಡ್ಡವನ್ನು ಬಳಸಿ ಸುತ್ತಿಕೊಂಡಿರುವ ಆ ಸಣ್ಣಗಿನ ಮಾರ್ಗದಲ್ಲಿ ಸುಬಾಹು ತನ್ನ ಕುದುರೆಯನ್ನು ಮುಂದೆ ಮುಂದೆ ನಡೆಸಿಕೊಂಡೇ ಇದ್ದನು. ಅವನ ಬಲಭಾಗದಲ್ಲಿ ಆಕಾಶದಷ್ಟೆತ್ತರಕ್ಕೆ ಗುಡ್ಡದ

ಗೋಡೆಯೂ ಎಡಗಡೆಯಲ್ಲಿ ಅಗಾಧವಾದ ಕಣಿವೆಯೂ ಇದ್ದುವು. ಕುದುರೆಯ ಕಾಲು ಅಪ್ಪಿತಪ್ಪಿ ಸ್ವಲ್ಪಮಾತ್ರ ಜಾರಿದರೂ ತಾನು ಪಾತಳಿಗೇ ಬಿದ್ದು ಚೂರುಚೂರಾಗುವುದೇ ನಿಜ. ಕ್ರಮವಾಗಿ ಕತ್ತಲೆ ಮುಸುಕಿಕೊಂಡು ಬರುವುದರಿಂದ ದಾರಿ ಸರಿಯಾಗಿ ಕಾಣುವುದೂ ಇಲ್ಲ. ಶತ್ರುಗಳು ತನ್ನನ್ನು ಬಿಡದೆ ಬೆಂಬತ್ತಿಕೊಂಡೇ ಇದ್ದಾರೆಂಬುದಕ್ಕೆ ಸೂಚನೆಯಾಗಿ ಕುದುರೆಗಳು ಕೆನೆಯುವ ಹೀಂಕಾರಗಳೂ, ಅವುಗಳ ಗೊರಸುಗಳಿಗೆ ತಾಗಿ ಪಾತಳಿಗೆ ಬೀಳುವ ಕಲ್ಲುಗಳ ಶಬ್ದವೂ ಕೇಳಿಕೊಂಡೇ ಇವೆ. ಅವರು ಸುತ್ತಿ ಬಳಸಿ ಇದಿರುಗಡೆಯಿಂದ ಬಂದರೆ ತಾನು ಇಷ್ಟರವರೆಗೆ ಬದುಕಿದ್ದೇ ವ್ಯರ್ಥ !

ಸ್ವಲ್ಪ ಹೊತ್ತಿಗೆಲ್ಲಾ ಚೆನ್ನಾಗಿ ಕತ್ತಲೆಬಿದ್ದು ಚಂದ್ರೋದಯವಾಯಿತು. ಬೆಟ್ಟದ ದಾರಿ ಇನ್ನಷ್ಟು ಅಂಕುಡೊಂಕಾಗುತ್ತಾ ಹೋಯಿತು. ಆ ಸಮಯದಲ್ಲಿ ಸುಬಾಹುವಿನ ಕಣ್ಣಿಗೆ ಶತ್ರು ಸೈನಿಕರು ಪಾತಳಿಯ ಆಚೆಗಿರುವ ಬೆಟ್ಟದ ದಾರಿಯಲ್ಲಿ ಕಾಣಿಸಿದರು. ಇದೀಗ ಹತ್ತು ಹದಿನೈದು ನಿಮಿಷಗಳ ಕೆಳಗೆ ಅವನು ಆ ಮಾರ್ಗದಿಂದಲೇ ಬಂದಿದ್ದ. ಮಧ್ಯದಲ್ಲಿರುವ ಅಗಾಧವಾದ ಪಾತಳಿ ಅವನನ್ನು ಅವರಿಂದ ಬೇರೆ ಬೇರೆ ಮಾಡಿದ್ದರೂ ಅಡ್ಡ ದಾರಿಯಲ್ಲಿ ನೋಡಿದರೆ ಅವರು ಅವನ ಸಮೀಪದಲ್ಲೇ ಇದ್ದಾರೆ.

"ಅವರಿಗೆ ಬಾಣ ಪ್ರಯೋಗಮಾಡಲು ಈಗ ಒಳ್ಳೆಯ ಅವಕಾಶ ! ಇನ್ನು ತಡಮಾಡುವಂತಿಲ್ಲ" ಎಂದುಕೊಳ್ಳುತ್ತಾ ಸುಬಾಹು ಕುದುರೆಯ ಮೇಲಿನಿಂದ ಇಳಿಯಲು ನೋಡಿದನು. ಅಷ್ಟರೊಳಗೆ ರಿವ್ವನೆ ಒಂದು ಬಾಣವು ಬರಲು ಸುಬಾಹು ಬಗ್ಗಿದನು. ಆ ಬಾಣದ ಗುರಿ ತಪ್ಪಿದರೂ ಇನ್ನೊಂದು ಬಾಣವು ಬಂದು ಕುದುರೆಯ ಪಕ್ಕೆಗೆ ಸಿಕ್ಕಿಕೊಂಡಿತು.

ಕುದುರೆ ಕೆಟ್ಟದನಿಯಿಂದ ಕಿರುಚುತ್ತಾ ಮುಂದಿನ ಕಾಲುಗಳನ್ನೆತ್ತಿ, ಬಲಗಡೆಯ ಗುಡ್ಡದಂಚಿಗೆ ತಲೆಯನ್ನು ಢೀಗೊಟ್ಟು ಧಡೀರನೆ ಮಗುಚಿಬಿತ್ತು. ಅದರೊಂದಿಗೆ ಸುಬಾಹು ಕೂಡಾ ನೆಲಕ್ಕೆ ಬಿದ್ದನು. ರಿಕಾಬಿನೊಳಗೆ ಅವನ ಕಾಲುಗಳು ಸಿಕ್ಕಿಕೊಂಡುದ



ರಿಂದ ಸುಬಾಹು ಹೊರಳುವ ಕುದುರೆಯಿಂದಾಗಿ ಪಾತಳಿಯ ಕಡೆಗೆ ಎಳೆಯಲ್ಪಟ್ಟನು. "ಹಾ! ಸಾಯುತ್ತೇನೆ ಪ್ರಭೂ!" ಎನ್ನುತ್ತಾ, ಹಾಗೆಯೇ ಐದಾರು ಹೊರಳಿಕೆಯಾಗುವಷ್ಟರಲ್ಲಿ, ಸ್ವಲ್ಪ ಇಳಿಜಾರಾಗಿದ್ದ ಪ್ರದೇಶದಲ್ಲಿ ಸುಬಾಹುವಿನ ಕೈಗೆ ಒಂದು ಬಲವಾದ ಮರದ ಕೊಂಬೆ ಸಿಕ್ಕಿತು.

ಅವನು ಅದನ್ನು ಎರಡು ಕೈಗಳಿಂದಲೂ ಗಟ್ಟಿಯಾಗಿ ಹಿಡಿದನು. ಅವನ ಕಾಲಿನೊಳಗಿನಿಂದ ರಿಕಾಬು ಜಾರಿಹೋಯಿತು. ಕುದುರೆ ಮಾತ್ರ ದೊಡ್ಡ ಶಬ್ದದಿಂದ ಇನ್ನಿಷ್ಟು ದೂರ ಹೊರಳುತ್ತ ಹೋಗಿ ಕಡೆಗೆ ಕಗ್ಗತ್ತಲೆಯ ಅಗಾಧದೊಳಗೆ ಕಾಣದೆಯೇ ಹೋಯಿತು. ಅದು ಪಾತಳಿಯ ತಳಕ್ಕೇ ಹೋಗಿರಬೇಕು.

ಆಗ ಗುಡ್ಡದಾಚೆಗಿನ ದಾರಿಯಲ್ಲಿ ಒಮ್ಮೆಗೇ ಹರ್ಷಧ್ವನಿಗಳೂ, ಚಪ್ಪಾಳೆಗಳೂ ಹೊರಟವು. ಅದನ್ನು ಕೇಳಿ ಸುಬಾಹು, ಅವರು ತಾನು ಸತ್ತು ಹೋದಾಯಿತೆಂದು ಭ್ರಮಿಸುವರೆಂದು ತಿಳಿದನು. ಕುದುರೆಯೊಂದಿಗೆ ತಾನೂ ಪಾತಳಿಗೆ ಬಿದ್ದು ಛಿನ್ನಾಭಿನ್ನನಾದೆನೆಂದು ಶತ್ರುಗಳು ಕುಣಿದಾಡುತ್ತಿದ್ದಾರೆಂದುಕೊಂಡನು. ತಾನಿನ್ನೂ ಬದುಕಿರುವುದು ಪ್ರಭುವಿನ ಪುಣ್ಯವೆಂದುಕೊಂಡನು.

ಸುಬಾಹು ಮರದ ಕೊಂಬೆಯಲ್ಲೇ ಕದಲದೆ ಗಟ್ಟಿಯಾಗಿ ಕುಳಿತನು. ಆ ಪ್ರದೇಶವು ಸ್ವಲ್ಪ ಕತ್ತಲೆಯಾಗಿದ್ದರೂ, ಬೆಳ್ಳಗಿನ ಚಂದ್ರ ಪ್ರಕಾಶದಲ್ಲಿ ತಾನು ಸ್ವಲ್ಪ ಕದಲಿದರೂ, ಅಲ್ಲಿಗೆ ಓಡಿಬಂದ ಶತ್ರುಗಳಿಗೆ ತಾನು ಗೊತ್ತಾಗುವಂತಿತ್ತು. ಆಗ ಇನ್ನೊಂದು ಬಾಣವು ಬಂದು ತನ್ನನ್ನು ಬಲಿ ತೆಗೆದುಕೊಳ್ಳುವ ಸಾಧ್ಯತೆಯಿತ್ತು.

ಸುಬಾಹು ಮರಗಳ ಸಂದಿನಲ್ಲೇ ಇಣುಕುತ್ತಾ, ಶತ್ರುಗಳ ಚಲನವಲನಗಳನ್ನು ಪರೀಕ್ಷಿಸಿಕೊಂಡೇ ಇದ್ದನು. ಅವರು ಪಾತಳಿಯ ಅಂಚಿನವರೆಗೆ ಬಂದು, ಮುಂದುಗಾಲೂರಿ ಬಗ್ಗಿ ನೋಡಿ, ಆಮೇಲೆ ತಮ್ಮ ತಮ್ಮ ಕುದುರೆಗಳ ಬಳಿಗೆ ಹೋಗಿ ತಮ್ಮೊಳಗೆ ಏನೇನೋ ಮಾಡಾಡಿಕೊಳ್ಳತೊಡಗಿದರು. ಒಂದು





ವೇಳೆ ಅವರು ತನ್ನನ್ನು ಕಂಡು ಹಿಡಿದರೇನೋ ಎಂದು ಭಯಪಡುತ್ತಿದ್ದ ಸುಬಾಹುವಿಗೆ, ಅವರು ಅಟ್ಟಹಾಸದಿಂದ ನಗುವ ಶಬ್ದ ಕೇಳಿತು. "ಅಬ್ಬಾ! ತೊಲಗಿದ. ದೊಡ್ಡ ಬಹುಮಾನ ನಮಗೆ! ಭಲೆ!" ಎಂದು ಮುಂತಾದ ಹರ್ಷೋದ್ಗಾರಗಳು! ಆಮೇಲೆ ಅವರು ತಮ್ಮ ಕುದುರೆಗಳ ಮೇಲೆ ಏರಿಕೊಂಡು, ಬಂದ ದಾರಿಯಲ್ಲಿಯೇ ಹಿಂದಿರುಗಿ ಹೋದರೆಂದೂ ಅವರ ಶಬ್ದಗಳಿಂದ ಸುಬಾಹುವಿಗೆ ತಿಳಿದು ಧೈರ್ಯ ಬಂದಿತು.

ಸಾವಕಾಶವಾಗಿ ಉಸಿರುಬಿಡುತ್ತ ಸಮಾಳಿಸಿಕೊಳ್ಳ ತೊಡಗಿದನು ಸುಬಾಹು. ರಿಕಾಬಿನಲ್ಲಿ ಸಿಕ್ಕಿ ಉಳುಕಿಕೊಂಡು ಕಾಲು ನೋಯುತ್ತಿದ್ದರೂ ಅದೊಂದು ದೊಡ್ಡದೆನಿಸಲಿಲ್ಲ. ಶತ್ರುಗಳಿಂದ ತಪ್ಪಿಸಿಕೊಂಡದ್ದೇ ದೊಡ್ಡ ವಿಷಯವಾಗಿತ್ತು. ಇನ್ನು ಹೇಗಾದರೂ ಸೂರ್ಯೋದಯವಾಗುವುದರೊಳಗೆ ವೀರಪುರವನ್ನು ಸೇರಿ, ಸರ್ಪಕೇತುವಿನ ಮೇಲೆ ಹಗೆ ತೀರಿಸುವ ಉಪಾಯವನ್ನು ಯೋಚಿಸಬೇಕಾಗಿತ್ತು. ದೇವರು ತನ್ನನ್ನು ಅದಕ್ಕಾಗಿಯೇ ಬದುಕಿಸಿದ್ದಾನೆ!

ಶತ್ರುಸೈನಿಕರು ಗುಡ್ಡದ ಬಳಸುದಾರಿಯಲ್ಲಿ ಕಣ್ಮರೆಯಾಗಿ ಹೋದ ಹೊತ್ತು ಬಂದ ಕೂಡಲೇ ಸುಬಾಹು ಕೊಂಬೆಗಳ ಮರೆಯಿಂದ ಹೊರಗೆ ಬಂದನು. ಅವನ ದುಸ್ತುಗಳು ಅಲ್ಲಲ್ಲಿ ಹರಿದು ಚಿಂದಿಯಾಗಿದ್ದುವು. ಶರೀರವು ಅನೇಕ ತರಚು ಗಾಯಗಳಿಂದ ರಕ್ತಸಿಕ್ತವಾಗಿತ್ತು. ಅವನು ಅಲ್ಲಿಯೇ ಕೈಗೆ ಸಿಕ್ಕಿದ ಹಸಿರೆಲೆಗಳನ್ನು ಎರಡು ಮುಷ್ಟಿಯಷ್ಟು ಹರಿದುಕೊಂಡು ಚೆನ್ನಾಗಿ ಹಿಸುಕಿ, ಹೊಸಕಿ ರಸತೆಗೆದು ಗಾಯಗಳಿಗೆ ಹಚ್ಚಿಕೊಂಡನು. ಆ ಸಮಯದಲ್ಲಿ ಸಮೀಪದಲ್ಲೆಲ್ಲಿಯೋ ಚಿರತೆಯ ಗರ್ಜನೆ ಕೇಳಿಸಿತು. ಕ್ರೂರಮೃಗದ ನಿಶಿತ ಮೂಗಿಗೆ ತನ್ನ ರಕ್ತದ ವಾಸನೆ ಬಂತೇನೋ!

ಚಿರತೆಯ ಶಬ್ದ ಕೇಳಿದ ಕೂಡಲೇ ಸುಬಾಹು ಮೈಜುಮುಗುಟ್ಟಿ ನಿಶ್ಚೇಷ್ಟಿತನಾದನು. ಈ ಗುಡ್ಡಗಾಡಿನಲ್ಲಿ ಚಿರತೆಗಳೂ, ತೋಳಗಳೂ ಮಾತ್ರವಲ್ಲದೆ ದೊಡ್ಡ ದೊಡ್ಡ ಹೆಬ್ಬಾವುಗಳೂ ಇರುತ್ತವೆಂದು ಅವನ ನೆನಪಿಗೆ ಬಂದಿತು. ಅಂತಹವುಗಳ ಬಾಯಿಗೆ ಬೀಳದಂತೆ ಪಾರಾಗಬೇಕಾದರೆ ರಕ್ಷಣೆಗೆ ಏನೋ ಒಂದು ಆಯುಧವು ಅಗತ್ಯವಾಗಿತ್ತು. ತನ್ನ ಕತ್ತಿಯೂ ಡಾಲೂ ಕುದುರೆ ಹೊರಳುವಾಗ ಎಲ್ಲಿಯೋ ಬಿದ್ದುಬಿಟ್ಟಿವೆ. ಅವುಗಳನ್ನು ಹುಡುಕಿ ವ್ಯರ್ಥವಾಗಿ ಹೊತ್ತು ಕಳೆಯುವಂತಿಲ್ಲ.

ಸುಬಾಹು ಅತ್ತಿತ್ತ ನೋಡಿದನು. ಕಡೆಗೆ ಕೈಗೆ ಸಿಕ್ಕಿದ ಒಂದು ದೃಢವಾದ ಮರದ ಕೊಂಬೆಯನ್ನು ಮುರಿದು ಸವರಿ ಕೈಯಲ್ಲಿ ಹಿಡಿದುಕೊಂಡನು. ಆಮೇಲೆ ಅಲ್ಲಿದ್ದ ಕಲ್ಲುಗಳನ್ನೂ, ಗಿಡ ಪೊದರುಗಳ ಬುಡವನ್ನೂ, ಆಧಾರವಾಗಿ ಹಿಡಿಯುತ್ತ ಮೆಲ್ಲ ಮೆಲ್ಲನೆ ತೆವಳುತ್ತ, ಸಮನೆಲದ ಮೇಲೆ ಬಂದು ಮುಟ್ಟಿದನು.

ಈಗ ತಾನು ಯಾವ ಮಾರ್ಗ ಹಿಡಿದು ಹೋದರೆ ಬೇಗನೇ ವೀರಪುರವನ್ನು ತಲುಪಬಹುದೆಂದು ಸುಬಾಹುವಿಗೆ ಗೊತ್ತಿತ್ತು. ಅವನು ಅಲ್ಲಿ ಕವಿದಿರುವ ಕುರುಡು ಬೆಳಕಿನಲ್ಲಿ ಜಾಗರೂಕತೆಯಿಂದ ನಡೆಯುತ್ತ, ಕ್ರೂರಮೃಗಗಳ ಕಾಟಕ್ಕೆ ಸಿಕ್ಕದೆ, ಮಧ್ಯರಾತ್ರಿಯಾಗುವ ಹೊತ್ತಿಗೆ ಗುಡ್ಡದ ಇಳಿಜಾರಿನಲ್ಲಿದ್ದ ಒಂದು ಚಿಕ್ಕ ಗ್ರಾಮದ ಕಡೆಗೆ ನಡೆದನು.

ಗ್ರಾಮವು ಅಷ್ಟು ದೂರದಲ್ಲಿದೆ ಎಂದಾಗ, ಸುಬಾಹುವಿಗೆ ದೀವಟಿಗೆಗಳ ಕಾಂತಿಯೂ, ಆ ಕಾಂತಿಯಲ್ಲಿ ಹಲವು ಜನರು ಸೇರಿ ಮಾತಾಡಿಕೊಳ್ಳುವಂತೆಯೂ ಕಂಡಿತು. ಇಷ್ಟೊಂದು ರಾತ್ರಿಯ ಹೊತ್ತಿನಲ್ಲಿ ಗ್ರಾಮವಾಸಿಗಳಿಗೆ ಗ್ರಾಮದ ಹೊರಭಾಗದಲ್ಲಿ ಏನು ಕೆಲಸ? ಬಹುಶಃ ಆ ದೀವಟಿಗೆಗಳು ಡಕಾಯಿತರ ಗುಂಪಿನವೋ ಏನೋ! ಈ ಅನುಮಾನ ಬರುವಾಗಲೇ ಸುಬಾಹುವಿಗೆ ಕುದುರೆಗಳ ಗೊರಸಿನ ಶಬ್ದ ಕೇಳತೊಡಗಿತು. ದಾರಿಯನ್ನು ಹಿಡಿದು ಅತಿವೇಗವಾಗಿ ಓಡುತ್ತಿದ್ದ ಕೆಲವು ಮಂದಿ ಕುದುರೇ ರಾಹುತರು, ದೀವಟಿಗೆ ಹಿಡಿದಿದ್ದವರ ಸಮೀಪ ಬಂದು, "ಏನ್ರೋ! ಇನ್ನೂ ಇಲ್ಲಿಯೇ ಹರಟೆ ಹೊಡೆಯುತ್ತಾ ಹೊತ್ತು ಕಳೆಯುತ್ತಿದ್ದೀರೇನು? ಹೂಂ! ನಡೆಯಿರಿ! ನಡೆಯಿರಿ!" ಎಂದು ಗಟ್ಟಿಯಾಗಿ ಕೂಗಿ ಹೇಳಿ, ಮುಂದಕ್ಕೆ ಸಾಗಿ ಹೋದರು.

ಈ ಘಟನೆ ಸುಬಾಹುವಿಗೆ ಆಶ್ಚರ್ಯವನ್ನುಂಟು ಮಾಡಿತು. ಅದರ ಹಿಂದೆಯೇ ಅನುಮಾನವೂ ಉಂಟಾಯಿತು. ಆ ದೀವಟಿಗೆ ಹಿಡಿದವರು ಕೊಳ್ಳೆ ಹೊಡೆಯುವ ಡಕಾಯಿತರಲ್ಲ; ಕುದುರೇ ರಾಹುತರು ಧರಿಸಿದ ದುಸ್ತುಗಳ ರೀತಿ ನೋಡಿದರೆ ಸೈನಿಕರಂತೆ ಕಾಣುತ್ತಿದ್ದಾರೆ. ಹಾಗಾದರೆ ಅವರು ವೀರಪುರದ ಸೈನಿಕರೇ? ದೀವಟಿಗೆಯ ಬೆಳಕಿನಲ್ಲಿ ಸೇರಿದವರೆಲ್ಲ




ಹೋಗಬೇಕಾದುದು ಯಾವ ಪ್ರಾಂತಕ್ಕೆ? ಆ ರಾಹುತರಿಗೂ ಅವರಿಗೂ ಏನು ಸಂಬಂಧ?

ಇಂತಹ ಪ್ರಶ್ನೆಗಳಿಗೆ ಸರಿಯಾದ ಉತ್ತರ ಪಡೆಯಬೇಕಾದರೆ, ತಾನು ಆ ದೀವಟಿಗೆಯ ಪ್ರಕಾಶಕ್ಕೆ ಹೋಗಿ ಮುಟ್ಟುವುದೇ ಸರಿಯಾದ ಮಾರ್ಗವೆಂದು ಸುಬಾಹು ಎಣಿಸಿದನು.

ಒಂದುವೇಳೆ ಅವರು ವೀರಪುರದವರೇ ಆಗಿದ್ದರೆ, ಅವರಿಂದ ತಾನೊಂದು ಕುದುರೆಯನ್ನು ಕೈಗಡವಾಗಿ ತೆಗೆದುಕೊಂಡು, ಬೇಗನೇ ವೀರಪುರವನ್ನು ಸೇರಬಹುದು. ಹಾಗಿಲ್ಲದೆ ಅವರು ಶತ್ರುಗಳಾಗಿದ್ದರೆ? ...ಸುಬಾಹು ತನ್ನ ದುಸ್ತನ್ನು ಪರೀಕ್ಷಿಸಿ ನೋಡಿಕೊಂಡನು. ತನ್ನ ಈ ಚಿಂದಿ ದುಸ್ತಿನಲ್ಲಿ ತಾನು ಇಂಥವನೆಂದು ಯಾರೂ ಗುರುತಿಸಲಾರರೆಂದು ಧೈರ್ಯಮಾಡಿಕೊಂಡನು. ಇತರ ಸಂದೇಹಗಳಿಗೆ ಎಡೆಗೊಡದೆ ಮುಂದೆ ನಡೆದು ದೀವಟಿಗೆಯವರನ್ನು ಸಮೀಪಿಸಿದನು.

ಅವನು ಅಷ್ಟು ದೂರದಲ್ಲಿ ಬರುವಾಗಲೇ ಅಲ್ಲಿರುವವರು ಅವನನ್ನು ನೋಡಿದರು. ಒಬ್ಬನು ದೊಡ್ಡ ಕಂಠದಿಂದ, "ಅಗೋ! ಯಾವನೋ ಒಬ್ಬ ಭಿಕ್ಷುಕ ಈ ಕಡೆಗೇ ಬರುತ್ತಿದ್ದಾನೆ. ಎಲೋ ತಿರುಕಾ! ಇನ್ನು ನೀನು ಮನೆ ಮನೆ ಬೇಡುವ ಅಗತ್ಯವೇ ಇಲ್ಲ. ಒಳ್ಳೇ ಧಾಂಡಿಗನಾಗೇ ಕಾಣುವಿ! ಬಾಬಾ! ಬೆಳಗಾಗುವುದರೊಳಗೆ ನಾವು ವೀರಪುರದಲ್ಲಿ ಕೊಳ್ಳೆ ಹೊಡೆಯುತ್ತೇವೆ. ನಮ್ಮ ಜತೆಯಲ್ಲಿ ಧೈರ್ಯದಿಂದ ಬಂದರೆ ನಿನಗೆ ಕೂಡಾ, ನಿನ್ನ ಹದಿನಾಲ್ಕು ತಲೆಮಾರಿನವರೆಗೆ ಧನವು ಸಿಕ್ಕಿಬಿಡುತ್ತೆ! ಏನನ್ನುವಿ? ಧೈರ್ಯವಿದೆಯೇ? ಬರುತ್ತೀಯಾ ನಮ್ಮೊಂದಿಗೆ! ದೊಡ್ಡ ಮಾರಾಮಾರೀ ಮಾಡಲಿಕ್ಕೆ ಗೊತ್ತಿದೆಯೇನೋ? ಸಾಮರ್ಥ್ಯವಿದೆಯೇ? ಇಲ್ಲದಿದ್ದರೆ ನಾವು ಸಾಮರ್ಥ್ಯ ರಸ ಸುರಿಯುತ್ತೇವೆ" ಎಂದನು. ಅವರೆಲ್ಲ ಕುಡಿದು ಮತ್ತರಾಗಿದ್ದಾರೆ!

ಅದನ್ನು ಕೇಳಿ ಸುಬಾಹು ನಿರ್ವಿಣ್ಣನಾದರೂ, ಸಮಾಧಾನ ತಂದುಕೊಂಡು, "ಹೌದಯ್ಯಾ ದೊರೇ! ನಾನೂ ನಿಮ್ಮೊಂದಿಗೆ ವೀರಪುರಕ್ಕೆ ಬರುತ್ತೇನೆ. ನನಗೆ ಧನಾ ಗಿನಾ ಏನೂ ಬೇಡ ಬಿಡ್ರೀ! ನಿಮ್ಮ ಸಾಮರ್ಥ್ಯದ ರಸವೂ ಬೇಡ. ನನ್ನೊಬ್ಬನಿಗಿಷ್ಟು ಕೂಳು ಸಿಕ್ಕಿದರೇ ಸಾಕು. ಏನು ಬೇಕಾದರೂ ಮಾಡುತ್ತೇನೆ. ಎಲ್ಲಕ್ಕೂ ಮೊದಲು ಹೊಟ್ಟೆಗೆ ಗಟ್ಟಿಯಾಗಬೇಕು ದೊರೆಗಳೇ! ಅನ್ನದ ಮುಖ ನೋಡಿ ಬಹಳ ದಿನಗಳಾಯ್ತು!" ಎಂದನು.

ಅದಕ್ಕೆ ಆಚೆಯವನು ಏನೋ ಹೇಳಲಿರುವಾಗ, ಕೆಲವುಂದಿ ಕುದುರೇ ಸವಾರರು ವೇಗವಾಗಿ ಅಲ್ಲಿಗೇ ಬರುತ್ತ, "ಸರ್ವಕೇತು ಮಹಾರಾಜರಿಗೆ ಜೈ!" ಎಂದು ಘೋಷಿಸಿ, "ಎಲ್ಲರೂ ತಯಾರಾಗಿದ್ದೀರಾ? ಮತ್ತೆ ಅದು ಮರೆತೇ ಇದು ಮರೆತೇ ಅಂದುಗಿಂದೀರಿ! ಮುಂದಡಿಯಿಟ್ಟ ಮೇಲೆ ಹಿಂದಡಿ ತೆಗೆಯಕೂಡದು. ಅಂದಹಾಗೆ, ನಿಮ್ಮಲ್ಲಿ ಯಾರಾದರೂ ವೀರಪುರದವರಿದ್ದಾರೋ? ಈಗಲೇ ನೋಡಿಕೊಳ್ಳಿ. ಆಮೇಲೆ ಗೋಳಾಡಿ ಲಾಭವಿಲ್ಲ! ಜಾಗ್ರತೆ!" ಎಂದರು ಅಧಿಕಾರವಾಣಿಯಿಂದ.

ಜನರಲ್ಲಿ ಒಬ್ಬನು ಸುಬಾಹುವನ್ನು ಅವರಿಗೆ ತೋರಿಸುತ್ತ, "ಇವನೊಬ್ಬನೇ ಈಗ ಬಂದ ಹೊಸ ಭಿಕ್ಷುಕ. ಉಳಿದವರೆಲ್ಲರೂ ಒಬ್ಬರನ್ನೊಬ್ಬರು ತಿಳಿದವರೇ. ಇವನೊಬ್ಬ ಹೊಸಬ ಈಗತಾನೇ ಬಂದುದರಿಂದ ಎಲ್ಲಿಯವನೋ ಏನೋ ನಮಗೆ ತಿಳಿಯದು" ಎಂದನು.

ಕುದುರೇ ಸವಾರರಲ್ಲೊಬ್ಬನು ಮುಂದಕ್ಕೆ ತೂರಿ, "ಹೇಯ್! " ಎನ್ನುತ್ತ ಸುಬಾಹುವಿನ ಕಡೆಗೆ ಬಂದನು. ಉಳಿದ ಸವಾರರೂ ಅವನ ಕಡೆಗೇ ಕುದುರೆಗಳನ್ನು ಹೊರಡಿಸಿದರು. —(ಇನ್ನೂ ಇದೆ)






# ಚೋರಶಿಖಾಮಣಿ

ಮತ್ತೆ ತನ್ನನ್ನು ಹಿಡಿದೆತ್ತಿಕೊಳ್ಳಲು ಬರುವ ರಾಜಾ ತ್ರಿವಿಕ್ರಮನಿಗೆ ಎಂತಹ ಸಮಸ್ಯೆಯನ್ನೊಡ್ಡಿ ತಲೆಯೊಡೆಸುವುದೆಂದು ಯೋಚಿಸುತ್ತ, ಕೊಂಬೆಯಲ್ಲಿ ನೇತಾಡಿಕೊಂಡಿದ್ದ ಬೇತಾಳಾವೇಶಿತ ಶವವನ್ನು, ರಾಜಾ ತ್ರಿವಿಕ್ರಮನು ಬಂದೇ ಬಂದು ಅಲ್ಲಿಂದ ಕೆಳಕ್ಕಿಳಿಸಿ, ತನ್ನ ಹೆಗಲಲ್ಲೇರಿಸಿಕೊಂಡು ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ! ಮನುಷ್ಯನು ತನ್ನ ಬದುಕಿಗೂ, ಉನ್ನತಿಗೂ ನಿರಂತರವಾಗಿ ಶ್ರಮಿಸಿಕೊಂಡೇ ಇರುತ್ತಾನೆ. ಮನುಷ್ಯನಾದ ನೀನು ಕೂಡಾ ಈ ಅರ್ಧರಾತ್ರಿಯ ಹೊತ್ತಿನಲ್ಲಿ ಅಂತಹ ಶ್ರಮವನ್ನೇ ಪಡುತ್ತಿರುವೆ ಎಂಬುದನ್ನು ನಂಬಲು ಸಾಧ್ಯವಾಗುವುದಿಲ್ಲ. ಕೆಲವು ಮಂದಿ ರಾಜರ ಬುದ್ಧಿ ವಕ್ರವಾಗಿರುವುದುಂಟು. ಯಾವ ಕ್ಷಣದಲ್ಲಿ ಏನು ತೋರುವುದೋ ಅದರಂತೆ ಮಾಡುವುದೇ ಒಳ್ಳೆಯದೆಂದುಕೊಳ್ಳುತ್ತಾರೆ. ಅದರಿಂದ ಪ್ರಜೆಗಳಿಗೆ ಇಕ್ಕಟ್ಟು ಬರಬಹುದು. ಬಹುಶಃ ನೀನೂ ಅಂಥವರಲ್ಲೊಬ್ಬನಾಗಿರಬೇಕು. ಹೋಲಿಸಿ ನೋಡಿಕೊಳ್ಳಬೇಕಾದರೆ ಉದಾಹರಣೆ

## ಬೇತಾಳಕಥೆಗಳು



ಯಾಗಿ ಉಗ್ರಶಿಖಿನೆಂಬ ಒಬ್ಬ ಚೋರ ಶಿಖಾಮಣಿಯ ಕಥೆ ಹೇಳುತ್ತೇನೆ. ನಡೆಯುವ ಶ್ರಮ ತಿಳಿಯದಂತೆ ಕೇಳು" ಎಂದು ಕಥೆ ಹೇಳಲು ಪ್ರಾರಂಭಿಸಿತು :

ಮಣಿಕರ್ಣಿಕಾ ದೇಶಕ್ಕೆ ಸತ್ಯೇಂದ್ರನು ರಾಜನಾಗಿದ್ದನು. ಆ ದೇಶದ ಹತ್ತಿರವಿರುವ ಅರಣ್ಯವನ್ನೂ, ಬೆಟ್ಟಗಳನ್ನೂ ಆಶ್ರಯಿಸಿಕೊಂಡು ಚೋರ ಶಿಖಾಮಣಿ ಉಗ್ರಶಿಖಿನು ಅಡಗಿಕೊಂಡಿದ್ದನು. ಅವನ ಅನೇಕ ಮಂದಿ ಅನುಚರರೂ ಗುಹೆಗಳಲ್ಲಿ ವಾಸಿಸುತ್ತಿದ್ದರು. ಊರೊಳಗೆ ಸಂಭಾವಿತರಂತೆ ತಿರುಗುವರು. ಅವರು ಅಲ್ಲಿ ಇಲ್ಲಿ ದಾರಿ ದೋಚುವುದು ಮಾತ್ರವಲ್ಲದೆ, ಆಗಾಗ ದೂರದೂರದ ಗ್ರಾಮಗಳಿಗೂ, ನಗರಗಳಿಗೂ ದಂಡೆತ್ತಿ ಹೋಗಿ ಮನೆಗಳನ್ನು ಕೊಳ್ಳೆ ಹೊಡೆದು ಹಿಂದಿರುಗಿ ತಮ್ಮ ರಹಸ್ಯ ಸ್ಥಾನಗಳನ್ನು ಸೇರಿಕೊಳ್ಳುತ್ತಿದ್ದರು. ಅವರೆಲ್ಲಾ ಕಳ್ಳತನಕ್ಕೆ ಹೋಗುವಾಗ, ಮುಸುಕು ಹಾಕಿಕೊಳ್ಳುವರು. ಆದುದರಿಂದ ಉಗ್ರಶಿಖಿನು ಕಳ್ಳರ ನಾಯಕನಾಗಿದ್ದರೂ ಅವನ ನಿಜರೂಪವನ್ನು ಯಾರೂ ನೋಡಿರಲಿಲ್ಲ. ನಾಯಕನ ಹೆಸರು ಉಗ್ರಶಿಖಿನೆಂಬುದಷ್ಟೇ ಗೊತ್ತಾಗಿತ್ತು.

ಉಗ್ರಶಿಖಿನ ಹೆಂಡತಿಗೆ ತನ್ನ ಗಂಡನು ಮಾಡುವ ಈ ಬಗೆಯ ಕೊಳ್ಳೆ ಸುಲಿಗೆಗಳು ಇಷ್ಟವಿರಲಿಲ್ಲ. ಅವುಗಳ ಮೇಲೆ ವಿಪರೀತ ಅಸಹ್ಯ ತೋರ್ಪಡಿಸುತ್ತಿದ್ದಳು. ಎಷ್ಟೋ ಸಾರಿ ಗಂಡನೊಡನೆ ಕಳ್ಳತನ ಮಾಡುವುದೂ, ಕದ್ದು ಮುಚ್ಚಿ ಬದುಕುವುದೂ ಒಳ್ಳೆಯದಲ್ಲವೆಂದು ಹೇಳಿ ಹೇಳಿ ನೋಡಿದ್ದಳು. ಆದರೆ ಉಗ್ರಶಿಖಿನು ಅವಳ ಮಾತುಗಳಿಗೆ ನಕ್ಕು, ತನಗೆ ಜೀವಿತದಲ್ಲಿ ಹೀಗೆ ಕಳ್ಳನಾಗಿದ್ದು ಬದುಕುವುದರ ಹೊರತು ಬೇರೆ ದಾರಿ ಸಾಧ್ಯವಿಲ್ಲವೆಂದು ಹೇಳಿಬಿಡುತ್ತಿದ್ದನು. ಅದೊಂದು ಚಟದಂತೆ ಅವನನ್ನು ಬಿಡದ ಅಂಟು ಜಾಡ್ಯವಾಗಿತ್ತು.

ಅಂತಹ ಉಗ್ರಶಿಖಿನಿಗೆ ಮದುವೆಯಾಗಿ ಇಪ್ಪತ್ತೈದು ವರ್ಷಗಳವರೆಗೂ ಮಕ್ಕಳಾಗಲಿಲ್ಲ. ಆಮೇಲೆ ಅವನ ಹೆಂಡತಿ ಒಬ್ಬ ಪುತ್ರನನ್ನು ಹಡೆದಳು. ಹಾಗಾದನಂತರ ಉಗ್ರಶಿಖಿನ ಮನಸ್ಸಿಗೆ ಏನೋ ಅನಿಸತೊಡಗಿತು. ಅದುವರೆಗೂ ಇಲ್ಲದಂತಹ ಮಾರ್ದವತೆಯೂ, ವಾತ್ಸಲ್ಯವೂ ಹುಟ್ಟತೊಡಗಿತು.

ಅವನ ಪಂಚಪ್ರಾಣಗಳೂ ಮಗನ ಮೇಲಿದ್ದುವು.

ಒಂದೊಂದು ಸಾರಿ ಅವನು ತನ್ನ ಗುಂಪಿನೊಂದಿಗೆ ದೂರ ಗ್ರಾಮಕ್ಕೆ ಕೊಳ್ಳೆ ಹೊಡೆಯಲು ಹೋದಾಗ, ಹಿಂದಿರುಗಿ ಬರಲು ನಾಲ್ಕೈದು ದಿನಗಳಾಗುತ್ತಿತ್ತು. ಆ ಕಾಲದಲ್ಲಿ ಉಗ್ರಶಿಖಿನು ಅನ್ಯಮನಸ್ಕನಾಗಿರುವಂತೆ ಕಾಣುತ್ತಿದ್ದನು. ಅವನೊಡನೆ ಮೊದಲಿದ್ದ ಆವೇಶವೂ ಕ್ರೌರ್ಯವೂ ಕಾಣುತ್ತಿರಲಿಲ್ಲ. ಕೊಳ್ಳೆ ಹೊಡೆಯುವ ಮನೆಗಳಲ್ಲಿ ಸಣ್ಣ ಸಣ್ಣ ಮಕ್ಕಳಿದ್ದರೆ ಮೈಮರೆತು ನಿಂತು ಬಿಡುವನು. ಒಂದೊಂದು

ಸಾರಿ ಅವರನ್ನು ಎತ್ತಿಕೊಂಡು ಮುದ್ದಾಡುವನು. ಸಿಕ್ಕಿಬೀಳುವ ಹಾಗಿರುವಾಗ ತಪ್ಪಿಸಿಕೊಂಡು ಬಿಡುವನು. ಈ ಧೋರಣೆ ಅವನ ಅನುಚರರಿಗೆ ಹಿಡಿಸುತ್ತಿರಲಿಲ್ಲ.

"ಹೀಗೆಲ್ಲಾ ನಾವು ಮುದ್ದು ಮೋಹಗಳಲ್ಲಿ ಬಿದ್ದು ಬಿಟ್ಟರೆ, ಎಂದೋ ಒಂದು ದಿನ ನಾವು ಸುಲಭವಾಗಿ ಸಿಕ್ಕಿಬೀಳುತ್ತೇವೆ. ನಿನಗೊಬ್ಬನಿಗೇನಾ ಮಗ ? ನಮಗೆಲ್ಲಾ ಮಕ್ಕಳಿಲ್ಲವೇ ? ಕಳ್ಳರಾಗಿರುವ ನಮಗೆ ಇಂತಹ ಮೃದು ಗುಣ ಒಳ್ಳೆಯದಲ್ಲ. 'ಚೋರ ಶಿಖಾಮಣಿಗಂತೂ ಇದು ದೊಡ್ಡ ಅವಲಕ್ಷಣ" ಎನ್ನುತ್ತಿದ್ದರು ಅನುಚರರು.

ಉಗ್ರಶಿಖಿನಿಂದ ಪ್ರಯತ್ನಿಸಿ ಕೂಡಾ ತನ್ನ ಮನಸ್ಸನ್ನು ಮೊದಲಿನ ಸ್ಥಿತಿಗೆ ತಂದುಕೊಳ್ಳಲು ಆಗಲಿಲ್ಲ. ಒಂದು ಸಾರಿ ಅವರೆಲ್ಲ ಈವರೆಗೂ ಹೋಗದ ಒಂದು ದೂರ ಪ್ರಾಂತದ ಊರಿಗೆ ಹೋದರು. ಅಲ್ಲಿ ಹೇರಳವಾಗಿ ಕೊಳ್ಳೆ ಹೊಡೆಯಲು ಸಿಗುವುದೆಂದು ಅವರಿಗೆ ಗೊತ್ತಾಗಿತ್ತು. ಅಲ್ಲಿಗೆ ಕುದುರೆಯ ಮೇಲೆ ನಾಲ್ಕು ದಿನ ಪ್ರಯಾಣ ಮಾಡಬೇಕಾಗುತ್ತದೆ. ಅವರು ರಾತ್ರಿಯ ಹೊತ್ತಿನಲ್ಲಿ ಪ್ರಯಾಣ ಮಾಡುತ್ತ, ಹಗಲಲ್ಲಿ ಮರಗಳ ಗುಂಪಿರುವಲ್ಲಿ ಅಡಗಿದ್ದು ದಣಿವಾರಿಸಿಕೊಳ್ಳುವರು.

ಹಾಗೆ ಹೊರಟ ಎರಡನೇ ದಿನ ಮಧ್ಯಾಹ್ನದ ಹೊತ್ತಿನಲ್ಲಿ, ಗೋಳೀಮರದ ನೆರಳಿನಲ್ಲಿ ಮಲಗಿ ನಿದ್ರೆಯಲ್ಲಿದ್ದ ಉಗ್ರಶಿಖಿನಿಗೆ ಒಂದು ಕನಸು ಬಿತ್ತು. ಆ ಕನಸಿನಲ್ಲಿ ಅವನನ್ನು ರಾಜಭಟರು ಓಡಿಸಿಕೊಂಡು ಬರುತ್ತಿದ್ದರು. ಅವನು ಏರಿಕೊಂಡ ಕುದುರೆಯ ಕಾಲು ಒಂದು ಮರದ ತುಂಡಿಗೆ ತಾಗಿ ಬದಿಗೆ ಹೊರಳಿಕೊಂಡಿತು. ಅದರೊಂದಿಗೆ ಉಗ್ರಶಿಖಿನೂ ಬಿದ್ದನು. ಬಿದ್ದವನು ಎದ್ದು ಸಾಧ್ಯವಾದಷ್ಟು ವೇಗವಾಗಿ ಓಡಲು ತೊಡಗಿದನು. ಆಗ ಅವನನ್ನು ಕುದುರೆಯ ಮೇಲೆ ಓಡಿಸಿಕೊಂಡುಬರುವ ರಾಜಭಟನೊಬ್ಬನು ಗುರಿ ನೋಡಿ ಬಲ್ಲೆಯನ್ನು ಬೀಸಿ ಒಗೆದನು. ಉಗ್ರಶಿಖನ ಬೆನ್ನಿಗೆ ಬಲ್ಲೆ ಆಳವಾಗಿ ಚುಚ್ಚಿಕೊಂಡಿತು. ಅವನು ಪ್ರಾಣಾಂತಿಕವಾದ ಬಾಧೆ





ಯಿಂದ ಮುಗ್ಗರಿಸಿ ಬೀಳುವಾಗಲೇ, ಅವನ ಹೆಂಡತಿಯೂ ಮೂರು ತಿಂಗಳ ಮಗುವೂ ಒಂದು ಗುಡ್ಡದ ಶಿಖರದಿಂದ ಕೆಳಗಿನ ಕಣಿವೆಗೆ ಬೀಳುವುದನ್ನು ನೋಡಿದನು.

ಉಗ್ರಶಿಖನು ಹುಚ್ಚು ಕೂಗಿನೊಂದಿಗೆ ಎದ್ದು ಕುಳಿತನು. ಅವನ ಸರ್ವಾಂಗವೂ ಕಂಪಿಸುತ್ತಿದ್ದಿತು. ತಾನು ಈಗ ನೋಡಿದ ಸ್ವಪ್ನವು ಭವಿಷ್ಯತ್ತಿನಲ್ಲಿ ನಿಜವಾಗುವುದೇನೋ ಎಂಬ ಭಯವು ಅವನಿಗೆ ಹಿಡಿಯಿತು. ಕಳ್ಳನಾಗಿರುವವನು ಒಂದಲ್ಲ ಒಂದು ದಿನ ಸಿಕ್ಕಿಬಿದ್ದು ತೀರುವನು ಎಂದು ದೊಡ್ಡವರು ಹೇಳುವುದನ್ನು ಕೇಳಿದ್ದನು. ಇದು ನಿಜವೇನೋ ಅನಿಸಿತು. ಆಗ ತನ್ನ ಹೆಂಡತಿ ಮತ್ತು ಮಗನ ಗತಿ ಏನಾದೀತು ?

ಉಗ್ರಶಿಖನು ಹೀಗೆ ಆಲೋಚಿಸಿ, ದೂರದಲ್ಲಿ ಮಲಗಿದ್ದ ತನ್ನ ಹತ್ತು ಮಂದಿ ಅನುಚರರನ್ನು ನಿದ್ದೆಯಿಂದ ಎಬ್ಬಿಸಿದನು. "ನಾವಿನ್ನು ಮುಂದೆ ಹೋಗುವುದು ಬೇಡ, ಇಲ್ಲಿಂದ ಹಿಂದೆ ಹೋಗಿ ಬಿಡೋಣ. ಶಕುನ ಚೆನ್ನಾಗಿಲ್ಲವೆಂದು ನನ್ನ ನಿರ್ಧಾರ" ಎಂದನು.

ಆ ಮಾತು ಕೇಳಿ ಉಳಿದ ಕಳ್ಳರು ಆಶ್ಚರ್ಯ ಪಟ್ಟರು. "ಇದೇನಿದು ? ನಾವು ಈವರೆಗೆ ಕೊಳ್ಳೆಯ ಸಂಪಾದನೆಗೆ ಹೊರಟು, ಕೆಲಸ ಮುಗಿಸದೆ ಹಿಂದಿರುಗಿದ್ದೇ ಇಲ್ಲ. ಈಗೇಕೆ ಹೀಗೆ ? ಅದೆಂಥ ಎಂದೂ ಇಲ್ಲದ ಶಕುನ ?" ಎಂದರು ಕಳ್ಳರು.

"ನಾನು ನಿಮಗೆಲ್ಲಾ ನಾಯಕ. ನಾನು ಹೇಳಿದ ಹಾಗೆ ನಡೆಯಬೇಕಾದ್ದೇ ನಿಮ್ಮ ಕೆಲಸ. ಇದಿರು ಪ್ರಶ್ನೆ ಮಾಡುವುದಲ್ಲ. ಹಿಂದಿರುಗಬೇಕೆಂದರೆ ಹಿಂದಿರುಗಲೇ ಬೇಕು. ಇದು ನನ್ನ ಆಜ್ಞೆ !" ಎಂದು ಉಗ್ರಶಿಖನು ಕತ್ತಿಯನ್ನು ಅಡಿಸಿ ಕಣ್ಣು ತಿರುಗಿಸಿಕೊಂಡು ಹೇಳಿದನು.

ಕಳ್ಳರೆಲ್ಲರೂ ಇಷ್ಟವಿಲ್ಲದೆ, ಸುಮ್ಮನಾಗಿ ಹಿಂದಿರುಗಿ ಹೊರಟರು. ಅವರೆಲ್ಲ ಬರಿಗೈಯಲ್ಲಿ ಹಿಂದೆ ಬಂದುದನ್ನು ನೋಡಿ, ಅವರ ಹೆಂಡತಿ ಮಕ್ಕಳಿಗೆಲ್ಲ ಬಹಳ ಆಶ್ಚರ್ಯವಾಯಿತು, ನಿರಾಶೆಯಿಂದ ಬಾಯಿ ಬಾಯಿ ಬಿಟ್ಟರು.

ಉಗ್ರಶಿಖನು ಎಲ್ಲರನ್ನೂ ಒಂದು ಕಡೆಯಲ್ಲಿ ಸಮಾವೇಶಗೊಳಿಸಿ, "ಬಂಧುಗಳೇ, ನಾವೆಲ್ಲರೂ ಊರೊಳಗಿನವರ ಹಾಗೆ ಮನುಷ್ಯರೇ. ಇಷ್ಟು ದಿನಗಳವರೆಗೆ ಇದನ್ನು ತಿಳಿಯದೆ ಕ್ರೂರ ಮೃಗಗಳ ಹಾಗೆ ಕಾಡಿನೊಳಗೆ ಬದುಕಿಕೊಂಡು ಬಂದೆವು. ಇದು ನಮ್ಮ ಮಕ್ಕಳಿಗೂ ವಾರಸತ್ವ ರೀತಿಯಲ್ಲಿ ಬರುವಂಥಾದ್ದು. ನಾವು ಬೆಳಗಾದ ಕೂಡಲೇ ಹೊರಟು ರಾಜಧಾನೀ ನಗರಕ್ಕೆ ಹೋಗಿ, ಅಲ್ಲಿರುವ ರಾಜಭಟರ ಕೈಗೆ ಸಿಕ್ಕಿ ಬಿಡೋಣ. ನಾವಾಗಿ ಸಿಕ್ಕಿ ಬೀಳುವುದರಿಂದ ಶಿಕ್ಷೆಬಿದ್ದರೂ, ಸಾಧಾರಣವಾಗಿರುತ್ತದೆ. ಅದರಿಂದ ನಮ್ಮ ಹೆಂಡತಿ ಮಕ್ಕಳು ಸ್ವೇಚ್ಛೆಯಾಗಿ ಉಳಿದ ಮಾನವರಂತೆ ಬದುಕಲು ಅವಕಾಶವಾಗುತ್ತದೆ.

ನಮ್ಮ ಭವಿಷ್ಯವು ಒಳ್ಳೆಯದಾಗ ಬೇಕಾದರೆ ಹೀಗೆ ಮಾಡುವುದೇ ಒಳ್ಳೆಯದು " ಎಂದನು.

ಅವನ ಮಾತು ಕೇಳಿ ಉಳಿದ ಕಳ್ಳರು ತಮ್ಮ ವ್ಯತಿರೇಕವನ್ನು ವ್ಯಕ್ತಪಡಿಸಿದರು. ತಾವೆಲ್ಲಾ ಇಷ್ಟರ ವರೆಗೆ ಮಾಡಿದ ಅಪರಾಧಗಳಿಗೆ ರಾಜನು ತಮ್ಮನ್ನು ಕಠಿಣ ಶಿಕ್ಷೆಗೇ ಗುರಿಪಡಿಸುತ್ತಾನೆಂದೂ, ಆದರಿಂದ ತಾವೂ, ಹೆಂಡಿರುಮಕ್ಕಳೂ ಕಷ್ಟಪಡಬೇಕಾಗುವು ದೆಂದೂ ಹೇಳಿದರು. ತಾವು ಯಾರೂ ಅರಣ್ಯ ಬಿಟ್ಟು ಎಷ್ಟು ಮಾತ್ರಕ್ಕೂ ಬಯಲಿಗೆ ಬರಲಾರೆ ವೆಂದು ಖಂಡಿತವಾಗಿ ಹೇಳಿಬಿಟ್ಟರು.

" ಅದು ನಿಮ್ಮ ಇಷ್ಟ. ನಾನು ಮಾತ್ರ ರಾಜನ ಬಳಿಗೆ ಹೋಗಿ ಶರಣಾಗತನಾಗುತ್ತೇನೆ. ರಾಜನು ಬಹಳ ಒಳ್ಳೆಯ ಮನಸ್ಸಿನವನೆಂದು ನನಗೆ ಗೊತ್ತಾಗಿದೆ. ನೀವೆಲ್ಲಾ ನಿಧಾನವಾಗಿ ಆಲೋಚಿಸಿರಿ. ಬೆಳಗಾಗುವುದರೊಳಗೆ ಒಂದು ನಿರ್ಣಯಕ್ಕೆ ಬನ್ನಿರಿ. ನನ್ನ ಆಲೋಚನೆಯೇ ಒಳ್ಳೆಯದೆಂದು ನಿಮಗೆ ತೋರದಿರದು " ಎಂದನು ಉಗ್ರಶಿಖಿ.

ಉಗ್ರಶಿಖಿನ ಹೆಂಡತಿಗೆ ಗಂಡನಲ್ಲಿ ಬಂದ ಮಾರ್ಪಾಡನ್ನು ನೋಡಿ ಹೇಳಲಾಗದಷ್ಟು ಸಂತೋಷವಾಯಿತು. ತಮ್ಮನ್ನು ಕಾಪಾಡುವಂತೆ ಇಷ್ಟದೈವವನ್ನು ಪ್ರಾರ್ಥಿಸಿಕೊಂಡಳು.

ತನ್ನ ಅನುಚರರು ತನ್ನ ಮಾತನ್ನು ಕೇಳದೆ ಇದಿರು ತಿರುಗಿದುದನ್ನು ನೋಡಿ, ಉಗ್ರಶಿಖಿನಿಗೆ ಬಹಳ ಕೋಪ ಬಂದಿತು. ಅದನ್ನೇ ನೆನೆಯುತ್ತಿದ್ದ ಅವನಿಗೆ ಆ ರಾತ್ರಿ ಸರಿಯಾದ ನಿದ್ದೆಯೇ ಬರಲಿಲ್ಲ. ಅವನು ಮೂರನೇ ಜಾಮದಲ್ಲಿ ತಂಗಾಳಿಯ ಸೇವನೆ ಗಾಗಿ ಹೊರಗೆ ಬಂದು ಕಾಲಾಡಿಸಿಕೊಂಡು ಹೋಗುತ್ತ, ಏನೋ ಮಾತಿನ ಶಬ್ದವನ್ನು ಕೇಳಿ, ಒಂದು ಮರದ ಕೆಳಗೆ ನಿಂತನು. ಸ್ವಲ್ಪ ದೂರ ಕತ್ತಲೆಯಲ್ಲಿ ಅವನ ಅನುಚರರಿಬ್ಬರು ಮಾತಾಡಿ ಕೊಂಡಿರುವುದು ಉಗ್ರಶಿಖಿನ ಕಿವಿಗೆ ಕೇಳಿಸಿತು.



" ಒಬ್ಬ ಮಗನು ಹುಟ್ಟಿದ ಮೇಲೆ ನಮ್ಮ ಉಗ್ರಶಿಖಿ ನಾಯಕನು ಪೂರ್ತಿ ಬದಲಾಗಿದ್ದಾನೆ. ಅವನು ತಾನಾಗಿ ಹೋಗಿ ಶರಣಾಗತನಾದ ಮೇಲೆ ರಾಜಭಟರು ಸುಮ್ಮನೆ ಬಿಡದೆ ನಾನಾ ಹಿಂಸೆ ಕೊಟ್ಟು ನಮ್ಮೆಲ್ಲರ ರಹಸ್ಯವನ್ನು ಅವನ ಬಾಯಿ ಯಿಂದ ಹೊರಡಿಸದೆ ಇರಲಾರರು. ಅವನನ್ನು ಹೋಗಲು ಬಿಟ್ಟರೆ ನಮಗೆ ಕ್ಷೇಮವಿಲ್ಲ. ಆದುದರಿಂದ ಅವನು ನಿದ್ದೆಯಲ್ಲಿರುವಾಗಲೇ ಅವನನ್ನು ಕುಟುಂಬ ದೊಂದಿಗೇ ಹತಮಾಡಿಬಿಡಬೇಕು " ಎಂದನೊಬ್ಬ.

" ನಾನು ಇದಕ್ಕೆ ಸಿದ್ಧನೇ. ಉಳಿದವರಿಗೂ ಈ ಸಂಗತಿ ಹೇಳಿದರೆ ಅವರೂ ಇದಕ್ಕೆ ಧೈರ್ಯ ದಿಂದ ಸಹಾಯ ಮಾಡದೆ ಇರಲಿಕ್ಕಿಲ್ಲ " ಎಂದ ಎರಡನೆಯವನು.

ಈ ಸಂಭಾಷಣೆಯನ್ನು ಕೇಳಿದ ಉಗ್ರಶಿಖಿನು ತನಗೂ ತನ್ನ ಹೆಂಡತಿ ಮಗಂದಿರಿಗೂ ಬರುವ ಗಂಡಾಂತರವನ್ನು ತಿಳಿದು ಚುರುಕಾದನು. ಓಡಿ



ಹೋಗಿ ತನ್ನ ಹೆಂಡತಿಯನ್ನೂ ಮಗನನ್ನೂ ಎಬ್ಬಿಸಿ ಕರೆದುಕೊಂಡು, ಗುಂಪಿನವರಿಗೆ ಗೊತ್ತಾಗದ ಹಾಗೆ ಕುದುರೆಯ ಮೇಲೇರಿಕೊಂಡು ರಾಜಧಾನಿಗೆ ಪ್ರಯಾಣ ಮಾಡಿದನು.

ಎರಡು ದಿನಗಳ ಮೇಲೆ, ಸೂರ್ಯನು ಮುಳುಗಿದ ಹೊತ್ತಿನಲ್ಲಿ ಅವನು ನಗರವನ್ನು ಪ್ರವೇಶಿಸಿದನು. ಆಗ ಕುದುರೆಯನ್ನು ನಗರದ ಹೊರಗೇ ಬಿಟ್ಟು, ಕಾಲುನಡಿಗೆಯಿಂದ ಹೆಂಡತಿಯನ್ನೂ ಮಗನನ್ನೂ ನಡೆಸಿಕೊಂಡು ಬೀದಿಗಳಲ್ಲಿ ಸಾಗಿದನು. ವರ್ಷಗಟ್ಟಲೆ ಅರಣ್ಯದೊಳಗೆ ಇದ್ದ ಅವನ ಹೆಂಡತಿಗೆ ಅಷ್ಟೊಂದು ಜನಸಮ್ಮರ್ದದಲ್ಲಿ ಮಗುವನ್ನೆತ್ತಿಕೊಂಡು ನಡೆಯುವುದು ಯಾವುದೋ ಹೊಸಲೋಕಕ್ಕೆ ಬಂದ ಹಾಗೆ ಬಹಳ ಕಷ್ಟವಾಯಿತು.

ಆ ರಾತ್ರಿ ಅವರು ಒಂದು ಛತ್ರದಲ್ಲಿ ಬಿಡಾರ ಹೂಡಿದರು. ಮಧ್ಯರಾತ್ರಿಯಲ್ಲಿ ಉಗ್ರಶಿಖಿನು ಹೆಂಡತಿಯೊಂದಿಗೆ ಹೀಗೆಂದನು :

"ನಾನು ಬೆಳಂಜಾವದ ಹೊತ್ತಿಗೆ ಎದ್ದು ಹೋಗಿ ರಾಜಭಟರ ಕೈಗೆ ಸಿಕ್ಕಿಕೊಳ್ಳುತ್ತೇನೆ"

ಅವನ ಹೆಂಡತಿ ಆ ಮಾತು ಕೇಳಿ ಬೆದರಿಬೀಳುತ್ತ, "ನಮ್ಮನ್ನು ಇಲ್ಲಿ ಈ ಜನಸಮುದ್ರದ ನಡುವೆ ಬಿಟ್ಟು ನೀವು ಸೆರೆಮನೆಗೆ ಹೋಗಿಬಿಟ್ಟರೆ ನಮ್ಮ ಗತಿ ಏನು ? ನಮಗಿಬ್ಬರಿಗೂ ಇಷ್ಟು ವಿಷಕೊಟ್ಟು ಹೋಗಿರಿ" ಎಂದಳು.

ಈಗ ಉಗ್ರಶಿಖಿನಿಗೆ ತಾನು ಊಹಿಸದಿದ್ದ ಹೊಸದೊಂದು ಸಮಸ್ಯೆ ಇದಿರಾಯಿತು. ತಾನು ತನ್ನೊಂದಿಗಿರುವ ಹಣದಿಂದ ನಗರದಲ್ಲಿ ಏನಾದರೊಂದು ವ್ಯಾಪಾರ ಶುರುಮಾಡಿ ಬದುಕಬಹುದೇನೋ ನಿಜ. ಆದರೆ ತಾನು ಚೋರ ಶಿಖಾಮಣಿ ಉಗ್ರಶಿಖಿನೆಂಬ ವಿಷಯ ಎಷ್ಟು ದಿನ ಅಡಗಿದ್ದೀತು ? ಯಾವುದೋ ಒಂದು ದಿನ ಅದು ಬಯಲಾಗಿಬಿಟ್ಟರೆ, ರಾಜನು ತನಗೆ ಇನ್ನಷ್ಟು ಹೆಚ್ಚಿನ ಶಿಕ್ಷೆ ಕೊಟ್ಟಾನು. ತನ್ನ ಗುಂಪಿನವರಿಂದ ಕೇಡು ಬಂದರೂ ಬಂದೀತು. ತಾನು ನೆಟ್ಟಗೆ ರಾಜನ ಹತ್ತಿರವೇ ಹೋಗಿ ಸಂಗತಿಯನ್ನೆಲ್ಲಾ ಹೇಳಿ ಬಗ್ಗಿಹೋದರೆ ಕಡಿಮೆ ಶಿಕ್ಷೆ ಬೀಳಬಹುದು. ಹೆಂಡತಿಗೂ ಮಗನಿಗೂ ರಾಜನ ರಕ್ಷಣೆ ದೊರೆಯಬಹುದು. ಆದರೆ ಹೆಂಡತಿಯನ್ನು ಸಮಾಧಾನ ಮಾಡಲು ಮಾತ್ರ ಅವನಿಂದಾಗಲಿಲ್ಲ.

ಉಗ್ರಶಿಖಿನು ಹೀಗೆ ಆಲೋಚನೆ ಮಾಡಿ, ಮರುದಿನ ಮಧ್ಯರಾತ್ರಿಯ ಹೊತ್ತಿನಲ್ಲಿ, ಹೆಂಡತಿಯೂ ಮಗನೂ ಗಾಢ ನಿದ್ರೆಯಲ್ಲಿರುವಾಗ, ಅಲ್ಲಿಂದ ಹೊರಟನು. ಚೋರ ವಿದ್ಯೆಗಳಲ್ಲಿ ಪಾರಂಗತನಾದ ಅವನಿಗೆ ರಾಜನ ಶಯ್ಯಾಗಾರವನ್ನು ಪ್ರವೇಶಿಸುವುದೊಂದು ದೊಡ್ಡ ಕಷ್ಟವಾಗಲಿಲ್ಲ. ಆದರೆ ಅವನು ನಿದ್ದೆಯಲ್ಲಿರುವ ರಾಜನ ಶಯ್ಯೆಯ ಹತ್ತಿರ ಹೋಗುವಾಗ, ಕಾಲಿಗೆ ಹಾಲು ಹಣ್ಣುಗಳ ಹರಿವಾಣವೊಂದು ತಗಲಿ ಅದು ಕೆಳಗೆ ಬಿದ್ದು ದೊಡ್ಡ ಶಬ್ದವಾಗಿ ಅವನನ್ನು ಬೆಚ್ಚಿ ಬೀಳಿಸಿತು.



ಆ ಶಬ್ದವನ್ನು ಕೇಳಿದ ಕಾವಲುಭಟರು, "ಕಳ್ಳ! ಕಳ್ಳ!" ಎನ್ನುತ್ತಾ ಅಲ್ಲಿಗೆ ಓಡಿಬಂದು ಉಗ್ರಶಿಖನನ್ನು ಸುತ್ತಿ ಹಿಡಿದರು.

ಅಷ್ಟರಲ್ಲಿ ರಾಜನಿಗೂ ನಿದ್ರಾಭಂಗವಾದುದರಿಂದ ಶಯ್ಯೆಯಲ್ಲಿ ಎದ್ದು ಕುಳಿತನು. ಉಗ್ರಶಿಖನು ತಾನು ಕಳ್ಳತನ ಮಾಡಲು ಬಂದವನಲ್ಲವೆಂದು ಪದೇ ಪದೇ ಹೇಳುತ್ತಿದ್ದನು.

"ಮೊದಲು ಅವನ ಹತ್ತಿರ ಆಯುಧಗಳೇನಿವೆಯೋ ನೋಡಿರಿ!" ಎಂದನು ಸತ್ಯೇಂದ್ರ ಮಹಾರಾಜ.

ಕಾವಲಿನವರು ಉಗ್ರಶಿಖನ ದುಸ್ತುಗಳನ್ನೆಲ್ಲಾ ಗಾಳಿಸಿ ನೋಡಿದರು. ಯಾವ ಆಯುಧವೂ ಅವರಿಗೆ ಸಿಗಲಿಲ್ಲ.

"ಅವನನ್ನು ಇಲ್ಲಿ ಬಿಟ್ಟು ನೀವೆಲ್ಲಾ ಹೊರಟು ಹೋಗಿರಿ" ಎಂದು ರಾಜನು ಕಾವಲಿನವರಿಗೆ ಆಜ್ಞೆ ಮಾಡಿದನು. ಕಾವಲಿನವರೆಲ್ಲ ಹೊರಟುಹೋದ ಮೇಲೆ ರಾಜನು ಉಗ್ರಶಿಖನನ್ನು ನೋಡಿ, "ನೀನು ಕಳ್ಳತನಕ್ಕೆ ಬರಲಿಲ್ಲವಾದರೆ ಮತ್ತೇತಕ್ಕೆ ಇಲ್ಲಿಯವರೆಗೆ ಬಂದೆ?" ಎಂದು ಕೇಳಿದನು.

ಉಗ್ರಶಿಖನು ತಲೆಬಾಗಿಸಿ ಎರಡು ಕೈಗಳನ್ನೂ ಜೋಡಿಸಿ ನಮಸ್ಕಾರ ಮಾಡಿ, "ಮಹಾಪ್ರಭೂ! ಮಾಡಿದ ತಪ್ಪುಗಳಿಗೆ ತಮ್ಮಿಂದ ಶಿಕ್ಷೆ ಅನುಭವಿಸಬೇಕೆಂದು ಇಲ್ಲಿಗೆ ಬಂದೆ. ರಾಜಭಟರ ಕೈಗೆ ಸಿಕ್ಕಿಬಿದ್ದರೆ ನನ್ನನ್ನು ಬಹಿರಂಗ ವಿಚಾರಣೆಗೆ ಗುರಿಪಡಿಸುತ್ತಾರೆ. ಆಗ ನನ್ನ ಹೆಂಡತಿಯೂ, ಮಗನೂ ಬಹಳ ಅವಮಾನದ ಪಾಲಿಗೆ ಬೀಳುತ್ತಾರೆ. ಬದುಕುವುದೂ ಕಷ್ಟ" ಎಂದು ತಾನು ಯಾರು ಏನೆಂಬುದನ್ನೆಲ್ಲಾ ವಿವರಿಸಿ ಹೇಳಿದನು,

ರಾಜನು ಮನಸ್ಸು ಕೊಟ್ಟು ಅವನ ವೃತ್ತಾಂತವನ್ನು ಕೇಳಿ, ತೃಪ್ತಿಯಿಂದ ತಲೆಯಾಡಿಸಿ, ಪಕ್ಕದಲ್ಲಿರುವ ಕೋಣೆಯೊಳಗೆ ಹೋಗಿ, ಒಂದು ಚಿಕ್ಕ ಮೂಟೆಯೊಂದಿಗೆ ತಿರುಗಿ ಬಂದು, "ನೋಡು ಉಗ್ರಶಿಖಾ, ಇದರಲ್ಲಿ ನೂರು ಬಂಗಾರದ ನಾಣ್ಯಗಳಿವೆ. ಮುಂದಿನ ವರ್ಷ ಇದೇ ದಿನ ನೀನು ಇನ್ನೂರು ಬಂಗಾರದ ನಾಣ್ಯಗಳನ್ನು ತಂದು ನನಗೆ ಕೊಡಬೇಕು. ಆ ಹಣವು ನೀನು ನ್ಯಾಯವಾಗಿ ಕಷ್ಟಪಟ್ಟು ಸಂಪಾದಿಸಿದ್ದಾಗಿರಬೇಕು. ನೆನಪಿರಲಿ" ಎಂದು ಹೇಳಿ ಹಣದ ಮೂಟೆಯನ್ನು ಉಗ್ರಶಿಖನಿಗೆ ಕೊಟ್ಟನು.

ತರುವಾಯ ರಾಜನು ಚಪ್ಪಾಳೆ ತಟ್ಟಿ ಭಟರನ್ನು ಬರಮಾಡಿ, "ಇವನನ್ನು ಮರ್ಯಾದೆಯಿಂದ ಕರೆದುಕೊಂಡು ಹೋಗಿ, ರಾಜಮಾರ್ಗದಲ್ಲಿ ಬಿಟ್ಟು ಬಂದುಬಿಡಿರಿ" ಎಂದು ಅಪ್ಪಣೆ ಕೊಟ್ಟನು. ಭಟರು ಹಾಗೆಯೇ ಮಾಡಿದರು.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ಎಲೈ ರಾಜನೇ! ಬಹು ದೊಡ್ಡ ಚೋರ ಶಿಖಾಮಣಿಯಾಗಿರುವ ಉಗ್ರಶಿಖನು ಸಿಕ್ಕಿಬಿದ್ದಾಗ, ರಾಜಾ

ಸತ್ಯೇಂದ್ರನು ಅವನನ್ನು ಶಿಕ್ಷಿಸುವುದಕ್ಕೆ ಬದಲಾಗಿ, ನೂರು ಬಂಗಾರದ ನಾಣ್ಯಗಳ ಮೂಟೆಯನ್ನು ಕೊಟ್ಟು ಕಳುಹಿಸಿದ್ದು, ರಾಜನಿಗೇನೋ ವಕ್ರಬುದ್ಧಿ ಬಂದಹಾಗೆ ಕಾಣುತ್ತದೆ. ಉಗ್ರಶಿಖನು ಇನ್ನು ಮೇಲೆ ದಾರಿ ದೋಚುವುದೋ ಮನೆಗಳಿಗೆ ನಗ್ಗು ವುದೋ ಮಾಡಲಾರನೆಂಬುದಕ್ಕೆ ಏನು ರುಜು ವಾತಿದೆ? ರಾಜನಾದ ಸತ್ಯೇಂದ್ರನಿಗೇನೋ ಅನೇಕ ಮಂದಿ ವೀರಭಟರು ಕಾವಲಿಗಿರುತ್ತಾರೆ. ಆದರೆ ಸಾಮಾನ್ಯ ಪ್ರಜೆಗಳ ಮಾತೇನು? ಮತ್ತೊಂದು ಸಂಗತಿ. ಉಗ್ರಶಿಖನಲ್ಲಿ ಪರಿವರ್ತನೆ ಬಂದಿತೆಂದು ಕೊಂಡರೂ ಅವನು ಅರಣ್ಯದಲ್ಲಿ ಬಿಟ್ಟು ಬಂದ ಅವನ ಗುಂಪು ಹಾಗೆಯೇ ಅಲ್ಲಿಯೇ ಇದೆಯಷ್ಟೆ? ಇದನ್ನೆಲ್ಲ ನೋಡಿದರೆ ರಾಜನು ಆಲೋಚನೆಯಿಲ್ಲದೆ, ಆ ಕ್ಷಣದಲ್ಲಿ ತೋರಿದ ಭಾವಾವೇಗದಿಂದ ಏನೋ ತಪ್ಪು ಮಾಡಿದಂತೆ ಕಾಣುತ್ತದಲ್ಲವೆ? ಈ ಸಂದೇಹ ಗಳಿಗೆ ತಕ್ಕ ಸಮಾಧಾನ ತಿಳಿದೂ ಹೇಳದೆ ಹೋದರೆ ನಿನ್ನ ತಲೆ ಸಿಡಿದು ಹಾರುತ್ತದೆಂದು ತಿಳಿ!" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಸತ್ಯೇಂದ್ರ ರಾಜನು ಉಗ್ರಶಿಖನನ್ನು ಶಿಕ್ಷಿಸದೆ ಹಾಗೆ ಕಳುಹಿಸಿ ಕೊಟ್ಟು ಬಹಳ ವಿಜ್ಞತೆಯನ್ನು ಪ್ರಕಟಿಸಿದ್ದಾನೆ. ಅಸಲು ಶಿಕ್ಷೆಯ ಉದ್ದೇಶವೇ ತಪ್ಪಿತಸ್ಥನು ತನ್ನ ತಪ್ಪನ್ನು ತಿಳಿದುಕೊಂಡು ಪರಿವರ್ತನೆಯುಂಟಾಗು ವಂತೆ ಮಾಡುವುದೇ. ಅಷ್ಟೇ ಅಲ್ಲದೆ, ಅವನನ್ನು ಶಾರೀರಕವಾಗಿ ಹಿಂಸಿಸುವುದು ಶಿಕ್ಷೆಯ ಉದ್ದೇಶ ವಲ್ಲ. ಅವನು ತನ್ನ ಅನುಚರರನ್ನು ಧಿಕ್ಕರಿಸಿ, ತನ್ನ ತಪ್ಪುಗಳಿಗೆ ಶಿಕ್ಷೆ ಹೊಂದಬೇಕೆಂತಲೇ ನಗರಕ್ಕೆ ಬಂದಿದ್ದಾನೆ. ಇನ್ನು ಮೇಲೆ ಉಗ್ರಶಿಖನು ಕಳ್ಳತನದ ಕೆಲಸಕ್ಕೆ ಹೋಗುವುದಿಲ್ಲವೆಂಬುದಕ್ಕೆ ಅದೇ ಮುಖ್ಯ ವಾದ ಸಾಕ್ಷಿ. ಅವನು ತನ್ನ ಕಥೆ ಪೂರಾ ರಾಜ ನೊಂದಿಗೆ ಹೇಳಿದ್ದಾನೆ. ಆದರಿಂದ ರಾಜನಿಗೆ ಅವನ ಅನುಚರರು ಇರುವ ಸ್ಥಳವೂ ಗೊತ್ತಾಗಿದೆ. ಅವರು ತಮ್ಮ ನಾಯಕನನ್ನು ಶಿಕ್ಷಿಸದೆ ಬಿಟ್ಟ ರಾಜನ ದಯಾ ಗುಣವನ್ನು ಕುರಿತು ಎಂದೋ ಒಂದು ದಿನ ತಿಳಿಯದೆ ಹೋಗಲಾರರು. ಆಗ ಅವರೂ ಉಗ್ರಶಿಖನ ಹಾಗೆ ರಾಜನ ಬಳಿಗೆ ಬಂದು ಕ್ಷಮಾಭಿಕ್ಷೆ ಕೇಳುವ ಸಾಧ್ಯತೆ ಬರಬಹುದು. ಹಾಗೆ ನಡೆಯದೆ ಹೋದರೆ ರಾಜನು ಸೈನಿಕರನ್ನು ಕಳುಹಿಸಿ ಯಾವಾಗ ಬೇಕಾದರೂ ಅವರನ್ನು ಬಂಧಿಸಿಬಿಡಬಲ್ಲನು. ಇಷ್ಟೆಲ್ಲಾ ಯೋಚನೆ ಮಾಡಿಯೇ ಸತ್ಯೇಂದ್ರನು ಹಾಗೆ ಮಾಡಿ ಉಗ್ರಶಿಖ ನನ್ನು ಹೋಗಲು ಬಿಟ್ಟಿದ್ದಾನೆ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವಸಮೇತ ಹಾರಿಹೋಗಿ ಎಂದಿನಂತೆ ಮರದ ಕೊಂಬೆಯಲ್ಲಿ ನೇತಾಡಿತು.






# ಮದ್ದೋ, ತಾಯತ್ತೋ?

ವಲ್ಲಭಪುರವೆಂಬ ಒಂದು ಗ್ರಾಮದಲ್ಲಿ ಸುಧೀರನೆಂಬವನು ವಿಶಾಲಾಕ್ಷಿ ಎಂಬ ಹೆಂಡತಿಯೊಂದಿಗೆ ವಾಸವಾಗಿದ್ದನು. ಒಂದು ಸಾರಿ ಅವರ ಐದು ವಯಸ್ಸಿನ ಮಗನಿಗೆ ಕಾಯಿಲೆ ಬಂದಿತು. ಕೊಂಡಾಟದ ಮಗನು ಕಾಯಿಲೆಯಿಂದ ಸಪ್ಪಗಾದನು.

ಆ ಗ್ರಾಮದಲ್ಲಿ ಒಳ್ಳೆಯ ವೈದ್ಯರಿರಲಿಲ್ಲ. ಪಕ್ಕದ ಊರಿನಲ್ಲಿ ಹೆಸರುವಾಸಿಯಾದ ದೊಡ್ಡ ವೈದ್ಯನಿದ್ದನು. ಸುಧೀರನು ಆ ದೊಡ್ಡ ವೈದ್ಯನ ಬಳಿಗೆ ಹೋದನು. ವೈದ್ಯನು ಏಳು ದಿನಗಳಿಗೆ ಸಾಕಾಗುವಷ್ಟು ಔಷಧವನ್ನು ಕೊಟ್ಟು ಕಳುಹಿಸಿದನು.

ಒಂದು ವಾರ ಕಳೆದ ಮೇಲೆ ಕೂಡಾ ಮಗನ ಕಾಯಿಲೆ ವಾಸಿಯಾಗುವ ಲಕ್ಷಣ ಕಾಣದುದನ್ನು ನೋಡಿ ವಿಶಾಲಾಕ್ಷಿಗೆ ಬಹಳ ಆಂದೋಲನೆಯಾಯಿತು. ಅವಳಿಗೆ ವೈದ್ಯನು ಕೊಟ್ಟ ಔಷಧದ ಮೇಲೆ ವಿಶ್ವಾಸವಿಲ್ಲದೆ ಹೋಯಿತು. ಆ ಗ್ರಾಮದಲ್ಲೇ ದೇವೀ ಉಪಾಸಕನಾದ ಪಾಪಣ್ಣನು ಮಂತ್ರಿಸಿದ ತಾಯತ್ತಿನಿಂದ ರೋಗಗಳನ್ನು ಗುಣಪಡಿಸುವನೆಂದು ಪ್ರಸಿದ್ಧನಾಗಿದ್ದನು, ಆ ತಾಯತ್ತಿನ ಮೇಲೆಯೇ ವಿಶಾಲಾಕ್ಷಿಯ ನಂಬುಗೆ. ಪ್ರತಿ ಶುಕ್ರವಾರ ದೇವೀ ಪೂಜೆಯಾದ ಮೇಲೆ ಪಾಪಣ್ಣನು ಕೊಡುವ ತಾಯತ್ತು ಪಡೆಯಲಿಕ್ಕಾಗಿ ದೂರದಿಂದಲೂ ಜನರು ಬರುವರು. ಅಲ್ಲಿಂದ ಒಂದು ತಾಯತ್ತು ತರುವಂತೆ ವಿಶಾಲಾಕ್ಷಿ ಗಂಡನಿಗೆ ಹೇಳಿದಳು.

" ಅದು ಅವಿವೇಕರಾದ ಪಾಮರರು ಮಾಡುವ ಕೆಲಸ. ಹಾಗೆ ತಾಯತ್ತಿಗಾಗಿ ಬರುವವರೊಂದಿಗೆ ನಾನು ಮಾತಾಡಿ ನೋಡಿದ್ದೇನೆ. ಅವರದು ಕೇವಲ ಮೂಢ ಭಾವನೆ, ಔಷಧದಿಂದ ವಾಸಿಯಾಗದ ರೋಗ ತಾಯತ್ತಿನಿಂದ ವಾಸಿಯಾಗುವುದುಂಟೆ? ನಾನು ಮತ್ತೆ ವೈದ್ಯರ ಬಳಿಗೆ ಹೋಗಿ, ಸಮಾಚಾರವೆಲ್ಲಾ ಹೇಳಿ, ಅವರು ಕೊಡುವ ಔಷಧವನ್ನೇ ತರುತ್ತೇನೆ, ಚಿಂತೆಪಡಬೇಡ " ಎಂದನು ಸುಧೀರ.

ಈ ಸಾರಿ ಸುಧೀರನು ಆ ದೊಡ್ಡ ವೈದ್ಯನ ಮನೆಗೆ ಹೋದಾಗ ವೈದ್ಯನು ಮನೆಯಲ್ಲಿರಲಿಲ್ಲ. ಆ ವೈದ್ಯರ ಪತ್ನಿಗೆ ಅನೇಕ ದಿನಗಳಿಂದ ಕಾಯಿಲೆಯಾಗಿರುವುದರಿಂದ, ಅವಳಿಗಾಗಿ ಪಾಪಣ್ಣನ ತಾಯತ್ತನ್ನು ತರಲು ವೈದ್ಯನು ಸುಧೀರನ ಗ್ರಾಮಕ್ಕೇ ಹೋಗಿರುವನೆಂದು ಮನೆಯವರು ಹೇಳಿದರು. ಅದನ್ನು ಕೇಳಿ ಸುಧೀರನಿಗೆ ಬಹಳ ಆಶ್ಚರ್ಯ!

ಕೆ. ವಿ. ಸುಬ್ರಾಯ

ಕೂಡಲೇ ಅವನು ತನ್ನ ಗ್ರಾಮಕ್ಕೇ ಹಿಂದಿರುಗಿದನು. ಅಲ್ಲಿ ಪಾಪಣ್ಣನ ಮನೆಯ ಮುಂದೆ ಅನೇಕ ಮಂದಿ ಗುಂಪು ಗೂಡಿದ್ದರು. ಅವರಲ್ಲಿ ನೆರೆ ಊರಿನ ದೊಡ್ಡ ವೈದ್ಯನೂ ಇದ್ದನು. ಸುಧೀರನು ಅವನೊಂದಿಗೆ ಮಗನ ಪರಿಸ್ಥಿತಿಯನ್ನು ಹೇಳಿದನು.

ಅದನ್ನು ಕೇಳಿ ವೈದ್ಯನು ತನ್ನ ಕೈಯಲ್ಲಿದ್ದ ಚೀಲದೊಳಗಿನಿಂದ ಯಾವ್ಯಾವುದೋ ಔಷಧಗಳನ್ನು ತೆಗೆದು, ಅದನ್ನು ಇನ್ನೊಂದು ವಾರದ ವರೆಗೆ ಕೊಡಲು ಹೇಳಿದನು. ಆಮೇಲೆ ಹುಡುಗನಿಗೆ ಹೇಗಿದೆ ಎಂದು ತಿಳಿಸಬೇಕೆಂತಲೂ ಹೇಳಿದನು.

ಸುಧೀರನು ಔಷಧವನ್ನು ಪಡೆದುಕೊಂಡು, ಆ ವೈದ್ಯನೊಂದಿಗೆ, "ಅಯ್ಯಾ, ಒಂದು ಸಂದೇಹ. ನೀವು ವೈದ್ಯಶಾಸ್ತ್ರದಲ್ಲಿ ಉತ್ತೀರ್ಣರಾಗಿರುವವರು, ಅಂತಹ ನೀವು ತಾಯತ್ತಿಗಾಗಿ ಬಂದಿರುವುದನ್ನು ನೋಡಿ ಆಶ್ಚರ್ಯವಾಗಿದೆ" ಎಂದನು.

ಆ ಮಾತಿಗೆ ವೈದ್ಯನು ನಕ್ಕು, "ಅದರಲ್ಲಿ ಅಂತಹ ಆಶ್ಚರ್ಯವೇನಿಲ್ಲ. ಹಿತ್ತಲ ಗಿಡ ಮದ್ದಲ್ಲವೆಂಬುದನ್ನು ಕೇಳಿದ್ದೀರಷ್ಟೆ ? ತಾಯತ್ತಿನ ಮಹಿಮೆಯನ್ನು ನಾನು ನಂಬಿದರೂ ಬಿಟ್ಟರೂ, ಇಷ್ಟು ಕಾಲ ನಾನು ಕೊಡುತ್ತಾ ಬಂದ ಔಷಧಗಳಿಂದ ನನ್ನ ಹೆಂಡತಿಗೆ ಗುಣವಾಗಲಿಲ್ಲ. ಅವಳಿಗೇ ಈ ತಾಯತ್ತಿನ ಮೇಲೆ ಆಸಕ್ತಿಯುಂಟಾಗಿದೆ. ವೈದ್ಯಶಾಸ್ತ್ರ ವಿಷಯ ಅವಳಿಗೇನೂ ತಿಳಿಯದೆ ಹೋದರೂ, ಔಷಧಗಳು ಹೇಗೆ ಕೆಲಸಮಾಡುತ್ತವೆಂದು ಸ್ವಲ್ಪ ಗೊತ್ತಿದೆ. ನಾನು ಯಾವ ಔಷಧಕ್ಕೆ ಯಾವ ಮೂಲಿಕೆಗಳನ್ನೂ, ವಸ್ತುಗಳನ್ನೂ ಉಪಯೋಗಿಸುವೆನೋ ಅದೂ ಅವಳಿಗೆ ಗೊತ್ತು. ಎಲ್ಲದಕ್ಕಿಂತಲೂ ಮುಖ್ಯವಾದುದು ರೋಗಿಗೆ ವೈದ್ಯನು ಕೊಡುವ ಔಷಧದ ಮೇಲೆ ನಂಬುಗೆ ಇರಬೇಕು. ಅದು ನನ್ನ ಹೆಂಡತಿಯಲ್ಲಿ ಇತ್ತೀಚಿಗೆ ಕಡಿಮೆಯಾಯಿತೆಂದು ನನಗೆ ಗೊತ್ತಾಯಿತು" ಎಂದನು.

ಸುಧೀರನು ವೈದ್ಯನು ಕೊಟ್ಟ ಔಷಧ ತೆಗೆದುಕೊಂಡು ಮನೆಗೆ ಹೋದನು.

ಅವನು ಔಷಧಕ್ಕಾಗಿ ನೆರೆಯ ಗ್ರಾಮಕ್ಕೆ ಹೋದ ಕೂಡಲೇ ಅವನ ಹೆಂಡತಿ ವಿಶಾಲಾಕ್ಷಿ ಪಾಪಣ್ಣನ ಬಳಿಗೆ ಹೋಗಿ ತಾಯತ್ತನ್ನು ತಂದಳು. ಅದನ್ನು ರಹಸ್ಯವಾಗಿ ಮಗನ ಉಡಿದಾರಕ್ಕೆ ಕಟ್ಟಿ ಕಾಣಿಸದಂತೆ ಮಾಡಿಟ್ಟಳು.

ಒಂದು ವಾರ ಕಳೆಯುವಾಗ ಸುಧೀರನ ಮಗನಿಗೆ ಕಾಯಿಲೆ ವಾಸಿಯಾಗುತ್ತಾ ಹೋಯಿತು. ವೈದ್ಯನು ಎರಡನೇಸಾರಿ ಕೊಟ್ಟ ಔಷಧವೇ ಗುಣಪಡಿಸಿತೆಂದು ಸುಧೀರನು ಅಂದುಕೊಂಡನು. ತಾನು ಕಟ್ಟಿದ ತಾಯತ್ತಿನಿಂದಲೇ ಗುಣವಾಯಿತೆಂದು ವಿಶಾಲಾಕ್ಷಿ ತಿಳಿದುಕೊಂಡಳು.





# ದಾನಮಹಿಮೆ

ಬ್ರಹ್ಮದತ್ತ ರಾಜನು ಕಾಶೀ ರಾಜ್ಯವನ್ನು ಪಾಲಿಸಿ ಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ಅವನ ಆಸ್ಥಾನ ದಲ್ಲಿ ಕೋಶಾಧಿಕಾರಿಯಾಗಿ ಅವತರಿಸಿದ್ದನು. ಅವನು ಎಂಬತ್ತು ಕೋಟಿಗಳಿಗೆ ಅಧಿಪತಿಯಾಗಿದ್ದು ಕೂಡಾ, ಪ್ರಪಂಚದ ಮೇಲೆ ವೈರಾಗ್ಯ ಬಂದು, ತನ್ನ ಧನವ ನ್ನೆಲ್ಲಾ ರಾಜನೇ ಸ್ವೀಕರಿಸಬೇಕೆಂದು ಕೇಳಿಕೊಂಡನು.

"ನನಗೆ ಧನಲೋಪವೇನೂ ಇಲ್ಲ. ಆದುದರಿಂದ ನೀನು ನಿನ್ನ ಧನವನ್ನು ಬೇರೆ ವಿಧವಾಗಿ ವಿನಿಯೋಗ ಮಾಡಿಬಿಡು. ಅದೇ ಒಳ್ಳೆಯದು." ಎಂದು ರಾಜನು ಆ ಹಣವನ್ನು ಮುಟ್ಟದೆ ಹೇಳಿದನು. ಆಗ ಕೋಶಾಧಿ ಕಾರಿ ರಾಜನ ಅನುಮತಿ ಪಡೆದು ಕಾಶೀ ನಗರದ ಬೇರೆ ಬೇರೆ ಕಡೆಗಳಲ್ಲಿ ಆರು ಅನ್ನಛತ್ರಗಳನ್ನು ಇಡಿಸಿದನು. ಆ ಛತ್ರಗಳಲ್ಲಿ ಭಾರಿ ರೀತಿಯಲ್ಲಿ ಎಡೆ ಬಿಡದೆ ದಾನ ಧರ್ಮಗಳು ನಡೆಯುತ್ತಿದ್ದವು. ಪ್ರತಿ ದಿನಾ ಒಂದೊಂದು ಲಕ್ಷ ವರಹಗಳು ಖರ್ಚಾಗಿ ಹೋಗುತ್ತಿದ್ದುವು.

ಈ ಬಗೆಯ ಅನ್ನಛತ್ರದ ರೂಪದಲ್ಲಿ ದಾನ ಧರ್ಮಗಳನ್ನು ಮಾಡಿದುದರ ಫಲಿತವಾಗಿ, ಆ ಕೋಶಾಧಿಕಾರಿ ಸತ್ತುಹೋದ ಮೇಲೆ ಸ್ವರ್ಗ ದಲ್ಲಿ ಇಂದ್ರ ಪದವಿಯನ್ನು ಸಂಪಾದಿಸಿದನು. ಭೂಮಿ ಯಲ್ಲಿರುವ ಅವನ ಕುಮಾರನು ತಂದೆಯ ಅಡಿ ಜಾಡಿನಲ್ಲಿಯೇ ನಡೆದು, ಕಾಲಾನುಕ್ರಮದಲ್ಲಿ ತೀರಿ ಹೋದ ಮೇಲೆ ಚಂದ್ರನಾಗಿ ಸ್ವರ್ಗದಲ್ಲಿ ಬೆಳಗಿದನು. ಅವನ ಮಗನೂ ತನ್ನ ಹಿರಿಯರ ಗುಣಗಳನ್ನು ಬಿಡದೆ ದಾನಧರ್ಮಗಳಿಂದ ಜೀವಿತ ಮುಗಿಸಿದ ಮೇಲೆ, ಸೂರ್ಯನಾಗಿ ಸ್ವರ್ಗಕ್ಕೆ ಅಲಂಕಾರ ಪ್ರಾಯ ನಾದನು. ಅವನ ಮಗನು ಮಾತಲಿಯಾಗಿಯೂ, ಮಾತಲಿಯ ಮಗನು ಪಂಚಶಿಖಾಗ್ನಿಯಾಗಿಯೂ ದೇವತ್ವವನ್ನು ಪಡೆದು ಸ್ವರ್ಗದಲ್ಲಿ ಸೇರಿದ್ದರು.

ಪಂಚಶಿಖಾಗ್ನಿಯ ತರುವಾಯ ಭೂಮಿಯಲ್ಲಿದ್ದ ಅವನ ಮಗನ ಕಾಲ ಬಂದಾಗ ವಂಶಾಚಾರವು ನಿರ್ಮೂಲವಾಗಿ ಹೋಯಿತು. ಏಕೆಂದರೆ ಪಂಚ ಶಿಖಾಗ್ನಿಯ ಮಗ ಎಂಬತ್ತು ಕೋಟಿಗಳಿಗೆ ಅಧಿಪತಿ ಯಾಗಿದ್ದರೂ ಪರಮಲೋಭಿಯಾಗಿದ್ದನು. ಆ ಲೋಭತ್ವದಿಂದ ಅವನ ನಿಜವಾದ ಹೆಸರೇ ಅಡಗಿ ಹೋಯಿತು. ಎಲ್ಲರೂ ಅವನನ್ನು "ಮಚ್ಛರ ಕೋಶೀಯ" ಎಂದು ಕರೆಯುತ್ತಿದ್ದರು. ತನ್ನ ತಂದೆ ಸತ್ತ ಕೂಡಲೇ ಅವನು ಮಾಡಿದ ಮೊದಲನೇ



ಕಾರ್ಯ ಅನ್ನಛತ್ರಗಳೆಲ್ಲವನ್ನೂ ಮುಚ್ಚಿಸಿದ್ದು. ಆ ಭವನಗಳನ್ನೆಲ್ಲ ಮಾರಾಟ ಮಾಡಿದನು. ಸುತ್ತು ಮುತ್ತಲಿದ್ದ ಮನೆಗಳನ್ನು ಕೆಡವಿಸಿದನು. ಕೆಲವನ್ನು ಸುಡಿಸಿದನು. ತನ್ನ ಪೂರ್ವಿಕರು ಕೇವಲ ಮೂಢರಾಗಿ ಹಣವನ್ನೆಲ್ಲಾ ದಾನಧರ್ಮಗಳಿಂದ ಹಾಳು ಮಾಡಿ ಹಾಕಿದರೆಂದು ಅವನು ಅಂದುಕೊಳ್ಳುತ್ತಿದ್ದನು.

ಅನ್ನಛತ್ರಗಳನ್ನು ಮುಚ್ಚಿದ ಕೂಡಲೇ ನಗರದಲ್ಲಿದ್ದ ಬಡಬಗ್ಗ ಭಿಕ್ಷುಕರೆಲ್ಲ ಮಚ್ಚರಕೋಶೀಯನ ಮನೆಯ ಮುಂದೆ ಗುಂಪಾಗಿ ಕೂಡಿ, "ಅಯ್ಯಾ! ಪುಣ್ಯಾತ್ಮರೆ! ದಾನಧರ್ಮ ಬಿಡಬೇಡಿ ಸ್ವಾಮಿ! ಛತ್ರಗಳನ್ನು ಮುಚ್ಚಬೇಡಿರಯ್ಯಾ!" ಎಂದು ದೀನಾಲಾಪಮಾಡಿದರು. ಮಚ್ಚರಕೋಶೀಯನು ಸ್ವಲ್ಪ ಕೂಡಾ ದಾಕ್ಷಿಣ್ಯವಿಲ್ಲದೆ ತನ್ನ ಆಳುಗಳಿಂದ ಅವರನ್ನೆಲ್ಲ ದೂರ ಓಡಿಸಿಬಿಟ್ಟನು.

ಕೋಟೀಶ್ವರನಾದ ಮಚ್ಚರಕೋಶೀಯನು ತನ್ನ ತಂದೆ ತಾತ ಮುತ್ತಾತರ ಹಾಗೆಯೇ ಮಹಾರಾಜನ ಕೋಶಾಧಿಕಾರಿಯಾಗಿ ಕೆಲಸ ಮಾಡುತ್ತಿದ್ದನು. ಆದರೆ ಅವನು ತನ್ನ ಹಣದಿಂದ ಎಂದೂ ಸುಖಾನುಭವ ಪಟ್ಟು ಅರಿಯನು. ತೃಪ್ತಿಯಾಗುವಂತೆ ತಿಂಡಿ ತೀರ್ಥ ಊಟಗಳನ್ನೂ ಅವನು ತಿಳಿದವನಲ್ಲ. ತನ್ನ ಹೆಂಡತಿ ಮಕ್ಕಳನ್ನೂ ತೃಪ್ತಿಯಾಗಿ ತಿನ್ನಲೂ ಬಿಡುತ್ತಿರಲಿಲ್ಲ. ಬಲು ಅಗ್ಗ ತರಗತಿಯ ಗೊಡ್ಡು ಸಾರು, ಗೊಡ್ಡು ಹುಳಿ, ನೀರು ಮಜ್ಜಿಗೆಯ ಊಟವನ್ನೇ ಮಾಡುತ್ತಿದ್ದನು. ನಾರು ಬಟ್ಟೆಗಳನ್ನೇ ಉಡುತ್ತಿದ್ದನು. ಇರುಸು ಸವೆದ ಹಳೆಯ ಗಾಡಿಗೆ ಸೊರಕಲು ಎತ್ತುಗಳನ್ನು ಕಟ್ಟಿ, ಆ ಗಾಡಿಯಲ್ಲೇ ಎಲ್ಲಿಗಾದರೂ ಹೋಗಿ ಬರುವನು.

ಒಂದು ದಿನ ಆ ಜಿಪುಣಾಗ್ರೇಸರನು ರಾಜನ ಸಭೆಗೆ ಹೋಗುವಾಗ, ಉಪ ಕೋಶಾಧಿಪತಿಯನ್ನು ಕೂಡಾ ತನ್ನೊಂದಿಗೆ ಕರೆದುಕೊಂಡು ಹೋಗೋಣವೆಂದು ಅವನ ಮನೆಗೆ ಹೋದನು. ಸರಿಯಾಗಿ ಅದೇ ಸಮಯದಲ್ಲಿ ಉಪ ಕೋಶಾಧಿಪತಿಯೂ, ಅವನ ಹೆಂಡತಿಯೂ, ಮಕ್ಕಳೂ ಎಲೆಗಳ ಮುಂದೆ ಕುಳಿತುಕೊಂಡು ಸೀ ಪೊಂಗಲ್ ತಿನ್ನುತ್ತಿದ್ದರು. ಕೋಶಾಧಿಕಾರಿಯನ್ನು ನೋಡಿದ ಕೂಡಲೇ, ಉಪ ಕೋಶಾಧಿಪತಿ ಮರ್ಯಾದೆಯಿಂದ ಎದ್ದು, ಅವನನ್ನು ಕೂಡಾ ಸೀ ಪೊಂಗಲು ತಿನ್ನಲು ಕೂಡುವಂತೆ ಆಹ್ವಾನಿಸಿದನು.

"ಈಗ ನಾನು ಇವನ ಆತಿಥ್ಯ ಸ್ವೀಕರಿಸಿ ಸೀ ಪೊಂಗಲ್ ತಿಂದುಬಿಟ್ಟರೆ ನಾಳೆ ನಾನು ಇವನ ಮನೆಯವರನ್ನೆಲ್ಲ ಕರೆದು ಉಪಚಾರ ಮಾಡಬೇಕಾಗುತ್ತದೆ!" ಎಂದು ಹೆದರಿ ಮಚ್ಚರಕೋಶೀಯನು, "ನನಗೆ ಏನೂ ಹಸಿವಿಲ್ಲ. ಈಗ ತಾನೇ ಮನೆಯಲ್ಲಿ ಹೊಟ್ಟೆ ತುಂಬಾ ತಿಂದು ಬಂದಿದ್ದೇನೆ. ನಿಮ್ಮದಾಗಲಿ" ಎಂದು ಹೇಳಿಬಿಟ್ಟನು.

ಆದರೆ ಆ ಕ್ಷಣದಿಂದಲೇ ಮಚ್ಚರಕೋಶೀಯನಲ್ಲಿ ಸೀ ಪೊಂಗಲ್ ತಿನ್ನಬೇಕೆಂಬ ಆಶೆಯೊಂದು ಹುಟ್ಟಿ, ಕ್ಷಣೇ ಕ್ಷಣೇ ತೀವ್ರವಾಗುತ್ತ ಹೋಯಿತು. ಆದರೆ



ತನ್ನ ಮನೆಯಲ್ಲಿ ಮಾಡಿಸಿಬಿಟ್ಟರೆ ತನ್ನೊಂದಿಗೆ ಇನ್ನೂ ಅನೇಕ ಮಂದಿ ತಿನ್ನುತ್ತಾರೆ. ಆದುದರಿಂದ ಅವನು ತನ್ನ ಕೋರಿಕೆಯನ್ನು ಯಾರ ಹತ್ತಿರವೂ ಬಯಲುಮಾಡದೆ, ಒಳಗೊಳಗೇ ಕುದಿಯುತ್ತ, ಮನೋವ್ಯಾಧಿಯಿಂದ ಹಾಸಿಗೆ ಹಿಡಿದನು.

ಗಂಡನ ಪರಿಸ್ಥಿತಿ ಹೀಗೇಕಾಯಿತೆಂದು ತಿಳಿಯದೆ ಹೆಂಡತಿ "ನಿಮಗೆ ಏನಾದರೂ ಕಾಯಿಲೆಯೇ ?" ಎಂದು ಕೇಳಿದಳು.

"ನಿನಗೇ ಏನಾದರೂ ಕಾಯಿಲೆಯೋ ಏನೋ ನೋಡಿಕೋ. ನನಗೇನಿಲ್ಲ. ನಾನು ಸುಮ್ಮನೆ ಮಲಗಿದ್ದೇನೆ ಅಷ್ಟೇ" ಎಂದನು ಮಚ್ಚರಕೋಶೀಯ.

ಆದರೆ ಅವನ ಹೆಂಡತಿ ಅಷ್ಟಕ್ಕೆ ಬಿಡದೆ ರಂಗಿನ ಮಾತುಗಳಿಂದ ಲಲ್ಲೆಯಾಡಿ ಮಂಗಾಡಿಸಿ ಕೇಳಿ ನಿಜ ಸಂಗತಿ ತಿಳಿದುಕೊಂಡಳು. "ಅಯ್ಯೋ ! ಅಷ್ಟೇನಾ ? ನಾವೇನು ದರಿದ್ರರೆ ? ಸೀ ಪೊಂಗಲಿಗಾಗಿ ಮನೋವ್ಯಾಧಿಯಿಂದ ನರಳಬೇಕೆ ? ಕಾಶೀ ನಗರದಲ್ಲಿರುವ ಜನರಿಗೆಲ್ಲಾ ಸೀ ಪೊಂಗಲು ಮಾಡಿಬಡಿಸುತ್ತೇನೆ. ನನಗೆ ಬಹು ರುಚಿಯಾಗುವಂತೆ ಮಾಡಲು ಬರುತ್ತದೆ !" ಎಂದಳು.

"ಹೌದು ಹೌದು. ನಿನ್ನ ತೌರು ಮನೆಯವರು ತುಂಬಾ ಭಾಗ್ಯವಂತರೆಂದು ನನಗೆ ಗೊತ್ತಿದೆ. ಅಲ್ಲಿಂದ ಬೇಕಾದ್ದೆಲ್ಲಾ ತಂದುಕೊಂಡು ಊರವರಿಗೆಲ್ಲಾ ಸೀ ಪೊಂಗಲಿನ ಸಮಾರಾಧನೆ ಮಾಡು" ಎಂದನು ಆ ಜಿಪುಣಾಗ್ರೇಸರ. "ಸರಿ ಬೇಡ. ಕಡೇಪಕ್ಷ ನಮ್ಮ ಬೀದಿಯವರನ್ನೆಲ್ಲಾ ಕರೆದು ಹಾಕೋಣ" ಎಂದಳು ಹೆಂಡತಿ. "ಬೀದಿಯವರೊಂದಿಗೆಲ್ಲಾ ನಿನಗೇನು ಕೆಲಸ ?" ಎಂದನು ಗಂಡ. "ಹೋಗಲಿ, ನಮ್ಮ ಮನೆಯವರಿಗೆಲ್ಲಾ ಸೇರಿ ಮಾಡುತ್ತೇನೆ" ಎಂದಳು ಹೆಂಡತಿ. "ಹಾಗೆಲ್ಲಾ ಕೂಡದು. ಕೂಡದೇ ಕೂಡದು" ಎಂದನು ಗಂಡ ಗಾಬರಿಯಾಗಿ. "ಸರಿಯಪ್ಪ, ನಿಮಗೂ ನನಗೂ ಮಾತ್ರವೇ ಸೀ ಪೊಂಗಲು ಮಾಡುತ್ತೇನೆ. ಆಯಿತಷ್ಟೆ?" ಎಂದಳು ಹೆಂಡತಿ. "ಅದೇಕೆ ? ಮಧ್ಯೆ ನಿನಗೇನಾಗಿದೆ ಕೇಡು ?" ಎಂದನು ಮಚ್ಚರಕೋಶೀಯ. "ಸರಿ ಬೇಡ. ನಿಮಗೊಬ್ಬರಿಗೇ ಮಾಡುತ್ತೇನೆ" ಎಂದಳು ಹೆಂಡತಿ ಬೇಸರದಿಂದ.

"ಏನೂ ಬೇಡ. ಮನೆಯಲ್ಲಿ ಮಾಡಲೇಬಾರದು. ಅದಕ್ಕೆ ಬೇಕಾದ ಅಕ್ಕೀ, ಹಾಲು, ತುಪ್ಪ, ಜೇನು, ಸಕ್ಕರೆ ಪಾತ್ರಗಳು ಎಲ್ಲಾ ನನ್ನ ಕೈಗೆ ಕೊಟ್ಟುಬಿಡು. ಮಾಡುವ ಕ್ರಮವೂ ಹೇಳಿಬಿಡು. ನಾನು ಕಾಡಿನ ಹತ್ತಿರ ಹೋಗಿ ಮಾಡಿಕೊಂಡು ತಿಂದು ಬರುತ್ತೇನೆ. ಇದು ನನಗೆ ಹಿಡಿದ ರೋಗಕ್ಕೆ ಒಂದು ಔಷಧ ಅಂತ ಅಂದುಕೋ" ಎಂದನು ಮಚ್ಚರಕೋಶೀಯ.

ಹೆಂಡತಿ ಸೀ ಪೊಂಗಲಿಗೆ ಬೇಕಾದ ಪದಾರ್ಥಗಳನ್ನೆಲ್ಲಾ ಗಂಡನಿಗೆ ತಂದುಕೊಟ್ಟಳು. ಅವುಗಳನ್ನೆಲ್ಲಾ ಒಬ್ಬ ನೌಕರನ ತಲೆಯಲ್ಲಿ ಹೊರಿಸಿ, ತನ್ನ ತಲೆಯ ಮೇಲೆ ಬಟ್ಟೆಯ ಮುಸುಗು ಹಾಕಿಕೊಂಡು ನದಿಯ



ತೀರದಲ್ಲಿರುವ ಅರಣ್ಯಕ್ಕೆ ಹೋದನು ಮಚ್ಚರಕೋಶೀಯ. ನದಿಯ ತೀರದಲ್ಲಿದ್ದೊಂದು ಪಾಳು ಗುಡಿಸಲಿನ ಪಕ್ಕದಲ್ಲಿ ಒಲೆ ಹಾಕಲು ಏರ್ಪಡಿಸಿದನು. ನೌಕರನಿಂದ ಕಟ್ಟಿಗೆಗಳಲ್ಲಿ ಒಲೆ ಹಚ್ಚಿಸಿದ್ದೂ ಆಯಿತು. ಆ ಮೇಲೆ ನೌಕರನನ್ನು ದೂರಹೋಗಿ, ರಹದಾರಿಯ ಹತ್ತಿರ ನಿಲ್ಲಲು ಹೇಳಿ, "ಯಾರಾದರೂ ಈ ಕಡೆಗೆ ಬರುವ ಹಾಗೆ ತೋರಿದರೆ ಓಡಿಬಂದು ನನಗೆ ತಿಳಿಸು. ನಿನ್ನ ಹತ್ತಿರ ನನಗೇನಾದರೂ ಕೆಲಸವಿದ್ದರೆ ಕರೆಯುತ್ತೇನೆ. ನಾನು ಕರೆದರೆ ಹೊರತು ಇತ್ತ ಬಂದುಬಿಡಬೇಡ" ಎಂದು ಎಚ್ಚರಿಕೆ ಹೇಳಿ ಕಳುಹಿಸಿದನು.

ಆಗ ಇಂದ್ರಪದವಿಯಲ್ಲಿರುವ ಇಂದ್ರನು, ಭೂಮಿಯಲ್ಲಿರುವ ತನ್ನ ಆರನೇ ತಲೆಮಾರಿನವನಾದ ಮಚ್ಚರಕೋಶೀಯನ ಸಂಗತಿಯನ್ನೆಲ್ಲಾ ತಿಳಿದನು. "ಪಂಚಶಿಖಾಗ್ನಿಯ ವರೆಗೆ ಎಲ್ಲರೂ ದಾನಧರ್ಮಗಳನ್ನು ಮಾಡಿ ದೇವತ್ವ ಪಡೆದಿದ್ದಾರೆ. ಈಗ ಈ ಪಂಚಶಿಖಾಗ್ನಿಯ ಮಗ ಜಿಪುಣಾಗ್ರೇಸರನಾಗಿ, ವಂಶಾಚಾರವನ್ನು ಮಣ್ಣುಗೂಡಿಸಿ, ಸೀ ಪೊಂಗಲನ್ನು ತಾನೊಬ್ಬನೇ ತಿನ್ನಲಿಕ್ಕಾಗಿ ಅರಣ್ಯಕ್ಕೆ ಬಂದು ಬೇಯಿಸಿಕೊಂಡಿದ್ದಾನೆ. ನಾನು ಇವನಿಗೆ ಜ್ಞಾನೋದಯವಾಗುವಂತೆ ಮಾಡದಿದ್ದರೆ ನರಕಕ್ಕೆ ಹೋಗುತ್ತಾನೆ" ಎಂದುಕೊಂಡು ಇಂದ್ರನು, ಚಂದ್ರನನ್ನೂ, ಸೂರ್ಯನನ್ನೂ, ಮಾತಲಿಯನ್ನೂ, ಪಂಚಶಿಖಾಗ್ನಿಯನ್ನೂ ಕರೆಯಿಸಿ ಅವರೊಡನೆ ತಾನು ಮಾಡಲಿರುವ ಕೆಲಸವನ್ನು ಹೇಳಿದನು.

ತರುವಾಯ ಇಂದ್ರನು ಬ್ರಾಹ್ಮಣ ವೇಷವನ್ನು ಧರಿಸಿ, ಮಚ್ಚರಕೋಶೀಯನು ಸೀ ಪೊಂಗಲು ಬೇಯಿಸುವಲ್ಲಿಗೆ ಬಂದು, "ಇಗೋಪ್ಪಾ, ಕಾಶಿಗೆ ಹೋಗುವ ದಾರಿ ಯಾವುದು?" ಎಂದು ಕೇಳಿದನು.

"ಕಾಶೀಗೆ ದಾರಿ ಗೊತ್ತಿಲ್ಲವೆ? ಈ ಕಡೆಗೇಕೆ ಬರುವೆ? ಆಚೆಗೆ ಹೋಗಯ್ಯಾ!" ಎಂದನು ಮಚ್ಚರಕೋಶೀಯ, ತನ್ನ ನೌಕರನಿಗೆ ಗೊತ್ತಾಗದ ಹಾಗೆ ಇವನು ಹೇಗೆ ಬಂದನೋ ಎಂದುಕೊಳ್ಳುತ್ತ.

"ಹಾಗೇಕೆ ಕೋಪಿಸುವೆಯಪ್ಪಾ? ಸೀ ಪೊಂಗಲು ಬೇಯಿಸುವ ಹಾಗೆ ಕಾಣುತ್ತದೆ. ಬ್ರಾಹ್ಮಣ ಸಂತರ್ಪಣೆ ಮಾಡುವಿ ಅಂತ ಕಾಣುತ್ತದೆ. ಒಳ್ಳೇದಾಯಿತು. ಅವರೊಂದಿಗೆ ನಾನೂ ಕೂತುಕೊಳ್ಳುತ್ತೇನೆ" ಎಂದನು ಇಂದ್ರ ನಗುತ್ತಾ.

"ಸಂತರ್ಪಣೆಯೂ ಇಲ್ಲ, ಗಿಂತರ್ಪಣೆಯೂ ಇಲ್ಲ, ಹೋಗೆಂದರೆ ಹೋಗಬೇಕು." ಎಂದು ಮಚ್ಚರಕೋಶೀಯನು ಹುಬ್ಬುಗಂಟಿಕ್ಕಿ ಜೋರಿನಿಂದ ಹೇಳಿದನು.

"ಯಾಕಪ್ಪಾ ಅಷ್ಟು ದೊಡ್ಡ ಕೋಪ? ಅಭ್ಯಾಗತನಾಗಿ ಬಂದ ಬ್ರಾಹ್ಮಣ, ಅದೇನು ಬೇಯಿಸುವೆಯೋ ಅದರಲ್ಲಿ ಒಂದಿಷ್ಟು ಮಾತ್ರ ಕೊಟ್ಟರೆ ಪುಣ್ಯವೇ ಹೊರತು ಪಾಪವೇನೂ ಬಾರದಷ್ಟೆ?" ಎಂದನು ಇಂದ್ರ. "ನೋಡಯ್ಯಾ! ನಾನು ನಿನಗೆ ಒಂದು ಅಗಳು

ಕೂಡಾ ನೀಡಲಾರೆ. ಇದು ನನಗೇ ಸಾಲದು. ನಾನೇ ಬಿಕ್ಕೆಬೇಡಿ ತಂದುಕೊಂಡಿದ್ದು. ಅದರಲ್ಲಿ ಮತ್ತೆ ನಿನಗೆ ಬೇರೆ ಬಿಕ್ಕೆಯೆ? ಇಲ್ಲಯಿಲ್ಲ! ಹೋಗಿಬಿಡು!" ಎಂದನು ಮಚ್ಚರಕೋಶೀಯ.

"ಸ್ವಲ್ಪವಾದರೆ ಸ್ವಲ್ಪ, ಅಷ್ಟರಲ್ಲೇ ದಾನಮಾಡಯ್ಯ. ಹೆಚ್ಚಿಗೆ ಇದ್ದರೆ ಹೆಚ್ಚೇ ಮಾಡಬಹುದು. ದಾನಕ್ಕೆ ಮನಸ್ಸು ಮಾಡಿದರೆ ನಿನಗೂ ತೃಪ್ತಿಯಾಗುವಷ್ಟು ಉಳಿದೇ ಇರುತ್ತೆ. ಒಂಟಿಯಾಗಿ ಏನೂ ತಿನ್ನಬಾರದು. ದಾನದಿಂದ ಉತ್ತಮ ಲೋಕಗಳು ಸಿಗುತ್ತವೆ" ಎಂದು ಇಂದ್ರನು ಶಾಂತರೀತಿಯಲ್ಲಿ ಬೋಧನೆ ಮಾಡಿದನು. ಕಡೆಗೆ ಮಚ್ಚರಕೋಶೀಯನು ಸ್ವಲ್ಪ ಮೆತ್ತಗಾಗಿ, "ಸರಿ. ಹಾಗೆ ಕುಳಿತುಕೋ. ನಿನಗೂ ಸ್ವಲ್ಪ ಕೊಡುತ್ತೇನೆ. ನಿನ್ನ ಚಿರಿಚಿರಿ ಮಾತು ನಿಲ್ಲಿಸು" ಎಂದನು.




ಅಷ್ಟರಲ್ಲಿ ಚಂದ್ರನು ಕೂಡಾ ಬ್ರಾಹ್ಮಣ ವೇಷದಲ್ಲಿ ಬಂದು ಸೀ ಪೊಂಗಲು ಯಾಚನೆ ಮಾಡಿದನು. ಅವನನ್ನು ಕೂಡಾ ಕುಳಿತುಕೊಳ್ಳಲು ಹೇಳದೆ ಬೇರೆ ಉಪಾಯವಿರಲಿಲ್ಲ. ತರುವಾಯ ಸೂರ್ಯನೂ, ಮಾತಲಿಯೂ, ಪಂಚಶಿಖಾಗ್ನಿಯೂ ಬ್ರಾಹ್ಮಣ ವೇಷದಲ್ಲಿ ಬಂದು ಸಾಲಾಗಿ ಕುಳಿತರು.

"ಪುಣ್ಯಾತ್ಮ. ಅತಿಥಿ ಉಪಚಾರದ ಮನಸ್ಸು. ಇಂತಹ ಮನಸ್ಸಿದ್ದರೆ ಎಷ್ಟೇ ಕಡಿಮೆ ಇದ್ದರೂ ಮನಸ್ತೃಪ್ತಿಯಾಗುವಷ್ಟು ಇದ್ದೇ ಇರುತ್ತದೆ. ಅದೇ ದಾನದ ಮಹಿಮೆ!" ಎಂದು ಬ್ರಾಹ್ಮಣರು ಮಾತಾಡುತ್ತ ಅವನನ್ನು ಹೊಗಳುತ್ತಿದ್ದರು.

ಬೇಗದಲ್ಲೇ ಸೀ ಪೊಂಗಲು ತಯಾರಾಯಿತು: "ಆಯಿತು. ಎಲೆ ತಂದುಕೊಳ್ಳಿರಿ" ಎಂದನು ಮಚ್ಚರಕೋಶೀಯ. ಬ್ರಾಹ್ಮಣರು ಕುಳಿತಲ್ಲೇ ಕೈ ಚಾಚಲು, ಅವರ ಕೈಗೆ ಬಂಡಿಚಕ್ರಗಳಷ್ಟು ದೊಡ್ಡ ತಾಮರೆ ಎಲೆಗಳು ಬಂದವು. ಅದನ್ನು ನೋಡಿ ಎದೆ ಢವಕ್ಕೆನಿಸಿ, "ಅಷ್ಟು ದೊಡ್ಡ ಎಲೆಗಳಿಗೆ ಬಡಿಸಲು ಸಾಧ್ಯವಿಲ್ಲ. ಹೋಗಿ ಮಂದಾರ ಎಲೆಗಳನ್ನು ತಂದುಕೊಳ್ಳಿರಿ" ಎಂದನು ಮಚ್ಚರಕೋಶೀಯ. ಅವರು ಕುಳಿತಲ್ಲೇ ತಾಮರೆ ಎಲೆಗಳನ್ನು ದೂರ ಹಾರಿಸಿ, ಮಂದಾರ ಎಲೆ ಹಾಕಿಕೊಂಡರು. ಅವು ಕೂಡಾ ಬಾಳೆ ಎಲೆಯಷ್ಟು ದೊಡ್ಡದಾಗಿದ್ದುವು. ಮಚ್ಚರಕೋಶೀಯನು ಸೀ ಪೊಂಗಲು ಬಡಿಸಿದನು. ಅವರೆಲ್ಲರಿಗೂ ಬಡಿಸಿಯಾದರೂ ಪಾತ್ರದಲ್ಲಿದ್ದುದು ಹಾಗೆಯೇ ಇದ್ದಿತು. ಅದನ್ನು ನೋಡಿ ಅವನಿಗೆ ಆಶ್ಚರ್ಯವಾಗುತ್ತಿತ್ತು.

ಆ ಸಮಯದಲ್ಲಿ ಪಂಚಶಿಖಾಗ್ನಿ ನಾಯಿಯ ರೂಪ ತಾಳಿ ಆ ಪಾತ್ರಕ್ಕೆ ಮೂತಿ ತೂರಿಸಲು ನೋಡಿದನು. ಅದನ್ನು ನೋಡಿ ಮಚ್ಚರಕೋಶೀಯನು ಪಾತ್ರಕ್ಕೆ ತನ್ನ ಕೈಯನ್ನು ಅಡ್ಡವಿಟ್ಟು "ಛೂ" ಎಂದು ನಾಯಿಯನ್ನು ತಡೆದನು. ಆಗ ನಾಯಿಯ ಎಂಜಲು ಜೊಲ್ಲು ಅವನ ಕೈಗೆ ತಾಗಿತು. "ಓಹೋಯ್! ನನ್ನ ಕೈ ತೊಳೆಯಲು ಸ್ವಲ್ಪ ನೀರು

ಕೊಡಿರಿ" ಎಂದು ಅವನು ಬ್ರಾಹ್ಮಣರನ್ನು ಕೇಳಿದನು. "ಕೊಡದು. ಆತಿಥ್ಯಕ್ಕೆ ಕುಳಿತವರು ಏಳಬಾರದು. ನೀರು ನೀನೇ ತಂದುಕೊಳ್ಳಬೇಕು" ಎಂದರು ಬ್ರಾಹ್ಮಣರು.

"ನನ್ನ ಸೀ ಪೊಂಗಲು ತಿನ್ನುವ ನಿಮಗೆ ಇಷ್ಟೊಂದು ವಿಶ್ವಾಸ ಕೂಡಾ ಇಲ್ಲವೆ?" ಎಂದು ಮಚ್ಚರ ಕೋಶೀಯನು ಅವರನ್ನು ಜರೆದನು. ಆದರೂ ಅವರಲ್ಲೊಬ್ಬನೂ ಎದ್ದು ನೀರು ತರಲು ಒಪ್ಪಲಿಲ್ಲ.

"ಸರಿ. ನಾನೇ ಹೋಗಿ ನೀರು ತಂದುಕೊಳ್ಳುತ್ತೇನೆ." ಎಂದು ಮಚ್ಚರಕೋಶೀಯನು ನದಿಯ ಬದಿಗೆ ಇಳಿದು ಹೋಗತೊಡಗಿದನು. ಕೂಡಲೇ ನಾಯಿ ಸೀ ಪೊಂಗಲಿನ ಪಾತ್ರದೊಳಗೆ ಮೂತಿಯನ್ನು ತೂರಿಸಿ ಬಿಟ್ಟಿತು.

ಅದನ್ನು ನೋಡಿದ ಮಚ್ಚರಕೋಶೀಯನು ಒಂದು ಕೋಲು ತೆಗೆದುಕೊಂಡು ನಾಯಿಯನ್ನು ಓಡಿಸಿಕೊಂಡು ಹೋದನು. ಅಷ್ಟರಲ್ಲಿ ಆ ನಾಯಿ ಕುದುರೆಯ ಆಕಾರ ಧರಿಸಿ ಹಿಂದಿರುಗಿ ಮಚ್ಚರ ಕೋಶೀಯನನ್ನೇ ಓಡಿಸಲು ಬರತೊಡಗಿತು. ಅದು ಕ್ಷಣ ಕ್ಷಣಕ್ಕೂ ಬಣ್ಣ ಬದಲಾಯಿಸಿಕೊಳ್ಳುತ್ತ ಸ್ವಲ್ಪ ಹೊತ್ತು ಸಣ್ಣದಾಗುತ್ತ, ಮತ್ತೆ ದೊಡ್ಡದಾಗುತ್ತ ಕಾಣತೊಡಗಿತು. ಮಚ್ಚರಕೋಶೀಯನು ಭೀತಿಯಿಂದ ಗಡಗಡ ನಡುಗತೊಡಗಿದನು. ಅವನು ಬ್ರಾಹ್ಮಣರನ್ನು ನೋಡಿ, "ಮಾಯಾವಿ ಬ್ರಾಹ್ಮಣರೇ! ಈ ಕುದುರೆಯಿಂದ ನನ್ನನ್ನು ಕಾಪಾಡಿರಿ!" ಎಂದು ಕೂಗಿದನು.

ಕೂಡಲೇ ಆ ಐವರೂ ನಿಜರೂಪ ಧರಿಸಿ ನೆಲಕ್ಕೆ ಸೋಂಕದೆ ಗಾಳಿಯಲ್ಲಿ ನಿಂತರು.

"ಓ! ನೀವು ಮನುಷ್ಯರೇ ಅಲ್ಲ! ದೇವತೆಗಳು. ಯಾರು ನೀವು? ಹೀಗೇಕೆ ಬಂದಿರಿ? ಏನು ನಿಮ್ಮ ಉದ್ದೇಶವೋ? ಹೇಳಿರಿ!" ಎಂದನು ಮಚ್ಚರ ಕೋಶೀಯ.

"ನಾವು ನಿನ್ನ ಪಿತೃದೇವತೆಗಳಪ್ಪಾ. ನಾವು ಮಾನವರಾಗಿರುವಾಗ ದಾನಧರ್ಮಗಳನ್ನು ಮಾಡಿದುದರ ಫಲಿತವಾಗಿ ದೇವತ್ವ ಸಂಪಾದಿಸಿಕೊಂಡವರು. ನೀನು ಲೋಭಿಯಾಗಿ ವಂಶಾಚಾರವನ್ನು ಮಣ್ಣುಗೂಡಿಸಿ ನರಕವನ್ನು ಸಂಪಾದಿಸಿಕೊಳ್ಳಲಿರುವ ನಿನಗೆ, ಬುದ್ಧಿ ಕಲಿಸಲಿಕ್ಕಾಗಿಯೇ ನಾವು ಬಂದೆವು. ಮನೆಗೆ ಹೋಗಿ ದಾನಧರ್ಮಗಳನ್ನು ಮಾಡಿ ನಮ್ಮ ಹಾಗೆ ನೀನೂ ದೇವತ್ವವನ್ನು ಸಂಪಾದಿಸುವವನಾಗು" ಎಂದನು ಇಂದ್ರನಾಗಿದ್ದವನು.

ಆಗ ಮಚ್ಚರಕೋಶೀಯನ ಬುದ್ಧಿ ಮಾರ್ಪಟ್ಟಿತು. ಅವನು ಮನೆಗೆ ಹೋಗಿ ತನ್ನ ಧನವನ್ನೆಲ್ಲಾ ಬಡಜನರಿಗೆ ದಾನಮಾಡಿ, ತಪಸ್ಸು ಮಾಡಲಿಕ್ಕಾಗಿ ಹಿಮಾಲಯಕ್ಕೆ ಹೋದನು.






# ಸ್ವಾತಂತ್ರ್ಯಸಿದ್ಧಿ

೧೯೩೯ ನೇ ಸಂವತ್ಸರದಲ್ಲಿ ಪಶ್ಚಿಮ ದೇಶಗಳಲ್ಲಿ ಪ್ರಾರಂಭವಾದ ಯುದ್ಧವು ಕ್ರಮವಾಗಿ ಪೂರ್ವ ದೇಶಗಳಿಗೆ ವ್ಯಾಪಿಸತೊಡಗಿತು. ಅಜೇಯವಾದ ದೇಶವೆಂದು ಹೆಸರು ಪಡೆದ ಇಂಗ್ಲಾಂಡು, ಹಠಾತ್ತಾಗಿ ಬಲೀಯವಾಗಿ ಹೋದ ಶತ್ರುದೇಶ ಜರ್ಮನಿಯನ್ನು ಇದಿರಿಸಬೇಕಾಯಿತು. ವಿಮಾನಗಳಿಂದ ಬಾಂಬು ತೂರುವುದು ಸುಲಭವಾದುದರಿಂದ ಯುದ್ಧಗಳು ಹೆಚ್ಚು ಭೀಕರವಾಗಿ ಮಾರ್ಪಟ್ಟವು.

ಜರ್ಮನಿಯ ನಿಯಂತ್ರಕಾರ ಹಿಟ್ಲರ್ ಕಂಡು ಕೇಳಿ ಅರಿಯದ ಹಿಂಸಾಕಾಂಡಕ್ಕೆ, ಕ್ರೂರಕೃತ್ಯಗಳಿಗೆ ಕೈಹಾಕಲಾರಂಭಿಸಿದನು. ಅವನು ಸ್ಟಾಲಿನ್ ಆಧಿಪತ್ಯದಲ್ಲಿದ್ದ ರಷ್ಯಾದೊಂದಿಗೆ ಮೊದಲು ಮೈತ್ರಿಯಾಗಿದ್ದು, ಹಠಾತ್ತಾಗಿ ತಿರುಗಿ ಬಿದ್ದನು. ಹಿಟ್ಲರ್ ಯೂಧರನ್ನು ತೀವ್ರವಾಗಿ ದ್ವೇಷಿಸಿದನು. ತನ್ನ ದೇಶದಲ್ಲಿಯೂ, ತಾನು ವಶಪಡಿಸಿಕೊಂಡ ದೇಶಗಳಲ್ಲಿಯೂ ಇದ್ದ ಲಕ್ಷಗಟ್ಟಳೆಯ ಯೂಧರನ್ನು ಅವನು ಹತಮಾಡಿಸಿ ಹಾಕಿದನು.





ಏಷ್ಯಾ ಖಂಡದೊಳಗಿನ ಜಪಾನು ಹಿಟ್ಲರ್‌ನೊಂದಿಗೆ ಕೈಸೇರಿಸಿಕೊಂಡಿತು. ಜಪಾನ್ ಚಕ್ರವರ್ತಿ ಹಿರೋಹಿಟೋ ಶಾಂತಿಕಾಮಿಯೇ ಆದರೂ, ರಾಜಕೀಯ ನಾಯಕರೂ ಸೈನ್ಯಾಧಿಪತಿಗಳೂ ದುರಾಶಾಪರರು. ಮುಸೋಲಿನಿಯ ನಿಯಂತ್ರಣದಲ್ಲಿರುವ ಇಟಲೀ ಕೂಡಾ ಜರ್ಮನ್, ಜಪಾನ್ ದೇಶಗಳೊಂದಿಗೆ ಜತೆ ಸೇರಿಕೊಂಡಿತು.



ದುರಾಕ್ರಮಣದಾರರಿಗೆ ವ್ಯತಿರೇಕವಾಗಿ ಬ್ರಿಟನ್ ಮೊದಲಾದ ದೇಶಗಳೊಂದಿಗೆ ಅಮೆರಿಕಾ ಸೇರಿದುದರಿಂದ, ಯುದ್ಧವು ದ್ವಿತೀಯ ಪ್ರಪಂಚ ಸಂಗ್ರಾಮವೆಂದು ಪ್ರಸಿದ್ಧವಾಯಿತು. ಭಾರತ ದೇಶಕ್ಕೆ ಸ್ವಾತಂತ್ರ್ಯವನ್ನು ಕೊಡುವೆವೆಂದು ಮಾತು ಕೊಟ್ಟರೆ, ತಾವು ಬ್ರಿಟನ್ನಿನೊಂದಿಗೆ ಸಹಕರಿಸುವುದಾಗಿ ಗಾಂಧೀಜಿ ತಿಳಿಯಪಡಿಸಿದರು. ಆದರೆ ಎಂತಹ ಭರವಸೆಯೂ ಬರಲಿಲ್ಲ. ಬ್ರಿಟಿಷರನ್ನು ದೇಶಬಿಟ್ಟು ಹೋಗುವಂತೆ "ಕ್ವಿಟ್ ಇಂಡಿಯಾ" ಚಳವಳಿ ೧೯೪೨ ನೇ ಸಂವತ್ಸರದಲ್ಲಿ ಪ್ರಾರಂಭವಾಯಿತು. ಸ್ವಾತಂತ್ರ್ಯ ವೀರರನ್ನು ಬ್ರಿಟಿಷ್ ಪ್ರಭುತ್ವವು ಸೆರೆ ಹಿಡಿದು ಹಿಂಸಿಸ ತೊಡಗಿತು.

ಅದೇ ಸಮಯದಲ್ಲಿ ಬ್ರಿಟಿಷ್ ಪರಿಪಾಲನೆಯಲ್ಲಿದ್ದ ಮಲಯ, ಸಿಂಗಪೂರ್‌ಗಳ ಮೇಲೆ ಜಪಾನ್ ದಾಳಿ ಮಾಡಿತು. ಬ್ರಿಟಿಷರ ಕೋಟೆಯಾಗಿ ಪರಿಗಣಿಸಲ್ಪಟ್ಟ ಸಿಂಗಪೂರ್ ಪತನವು ಎಲ್ಲರನ್ನೂ ಆಶ್ಚರ್ಯಪಡಿಸಿತು. ಜರ್ಮನೀ ಜಪಾನ್ ಸೇರಿಕೊಂಡ (ಯಾಕ್ಸಿಸ್) ದೇಶಗಳ ಕೈಯಲ್ಲಿ ಬ್ರಿಟನ್ ಅಮೆರಿಕಾ ಮಿತ್ರದೇಶಗಳು ಸೋತು ಹೋಗುವಂತಹ ಸಮಯವು ಆಸನ್ನವಾಯಿತು.





ಬ್ರಿಟಿಷರಿಂದ ಸೆರೆ ಮಾಡಲ್ಪಟ್ಟ ಭಾರತ ನೇತಾರ ಸುಭಾಷಚಂದ್ರಬೋಸ್, ತಪ್ಪಿಸಿಕೊಂಡು ಕಾಬೂಲಿಗೆ ಹೋಗಿ ಅಲ್ಲಿಂದ ೧೯೪೩ ನೇ ಸಂವತ್ಸರದಲ್ಲಿ ಸಿಂಗಪೂರನ್ನು ತಲುಪಿದರು. ಸೋತು ಹೋದ ಬ್ರಿಟಿಷ್ ಸೈನ್ಯದೊಳಗಿನ ಭಾರತೀಯ ಸೈನಿಕರನ್ನು ಒಂದುಗೂಡಿಸಿ ಭಾರತ ರಾಷ್ಟ್ರೀಯ ಸೈನ್ಯದ ಹೆಸರಿನಲ್ಲಿ ಸ್ವಾತಂತ್ರ್ಯ ವೀರರಿಗೆ ಶಿಕ್ಷಣ ಕೊಡತೊಡಗಿದರು. ಜರ್ಮನೀ, ಜಪಾನ್ ಸೇರಿಕೆಯ ದೇಶಗಳ ಸಹಾಯದಿಂದ, ಆಂಗ್ಲೇಯರನ್ನು ಓಡಿಸುವುದು ಅವರ ಪಥಕವಾಗಿತ್ತು.

ಭಾರತೀಯ ರಾಷ್ಟ್ರೀಯ ಸೇನೆಗಳು ಅನೇಕ ಅಡ್ಡಿ ಆತಂಕಗಳನ್ನು ದಾಟಿ ಭಾರತ ದೇಶದ ಕಡೆಗೆ ಪ್ರಯಾಣಿಸುತ್ತ ಮಣಿಪೂರ್‌ನಲ್ಲಿಯ ಕೋಹಿಮಾನ್ ಎಂಬಲ್ಲಿಗೆ ಬಂದು ಸೇರಿದುವು. ಆಮೇಲೆ ಸಾಕಷ್ಟು ಆಯುಧಗಳಿಲ್ಲದ್ದರಿಂದ, ಅಲ್ಲಿಂದ ಮುಂದೆ ಸಾಗಲಾಗಲಿಲ್ಲ. ಜಪಾನು ಕೂಡಾ ವಿಜಯದ ಅವಕಾಶವನ್ನು ಕಳೆದು ಕೊಂಡಿತು. ೧೯೪೫ ನೇ ಸಂವತ್ಸರದ ಆಗಸ್ಟ್‌ನಲ್ಲಿ ಸುಭಾಷ್ ಚಂದ್ರ ಬೋಸ್ ರಹಸ್ಯದಲ್ಲೇ ಮರೆಯಾದರು.





ಆ ಸಮಯದಲ್ಲಿಯೇ ಮುಸ್ಲಿಂಲೀಗ್ ನಾಯಕ ಮಹಮ್ಮದಾಲಿ ಜಿನ್ನಾ ಮಹ್ಮದೀಯರಿಗೆ ಪಾಕಿಸ್ತಾನ್ ಹೆಸರಿನಲ್ಲಿ ಪ್ರತ್ಯೇಕ ಪ್ರಾಂತ ಬೇಕೆಂದರು. ಅವರ ಕೋರಿಕೆ ಒಳ್ಳೆಯದಲ್ಲವೆಂದು ತಿಳಿಹೇಳಲು, ಎಷ್ಟೋ ಮಂದಿ ದೇಶ ನಾಯಕರು ಪ್ರಯತ್ನಿಸಿದರು. ಆದರೂ ಬ್ರಿಟಿಷರು ಪರೋಕ್ಷವಾಗಿ ನೀಡುತ್ತಿದ್ದ ಪ್ರೋದ್ಬಲದಿಂದ ಜಿನ್ನಾ ತನ್ನ ಹಟವನ್ನು ಬಿಡಲಿಲ್ಲ.

ಎಷ್ಟೋ ಕಾಲದಿಂದ ಸೋದರಭಾವದಲ್ಲಿ ಸ್ನೇಹವಾಗಿ ನಡೆದುಕೊಂಡಿದ್ದ ಹಿಂದು ಮುಸ್ಲಿಂ ಪ್ರಜೆಗಳ ಹೃದಯಗಳಲ್ಲಿ ಪಾಕಿಸ್ತಾನ್ ಏರ್ಪಾಟಿನ ವಾದವು ವಿಷಬೀಜ ಬಿತ್ತಿತು. ತಮ್ಮ ಕೋರಿಕೆಯನ್ನು ಒತ್ತಿ ಹೇಳಬೇಕೆಂಬ ಉದ್ದೇಶದಿಂದ ಮುಸ್ಲಿಂಲೀಗ್ ೧೯೪೬ ನೇ ಸಂವತ್ಸರ ಆಗಸ್ಟ್ ೧೬ ನೇ ದಿನ ಪ್ರತ್ಯೇಕ ಚರ್ಯೆಯನ್ನು ಪ್ರಕಟಿಸಿತು. ಕಲಕತ್ತಾ, ಢಿಲ್ಲೀ ಮೊದಲಾದ ಹಲವು ಪ್ರಾಂತಗಳಲ್ಲಿ ಮತ ಕಲಹಗಳಿಂದ ತೀವ್ರ ರಕ್ತಪಾತ ನಡೆಯಿತು. ಸಾವಿರಾರು ಪಾಪದ ಪ್ರಜೆಗಳು ಪ್ರಾಣಗಳನ್ನು ಕಳೆದುಕೊಂಡರು.






ಸ್ವಾತಂತ್ರ್ಯೋದ್ಯಮದ ನಾಯಕರೂ ದೊಡ್ಡ ರಾಜಕೀಯವೇತ್ತರೂ ಆದ ಜವಹರ್‌ಲಾಲ್ ನೆಹ್ರೂ ೧೯೪೬ ನೇ ಸಂವತ್ಸರದಲ್ಲಿ ಏರ್ಪಟ್ಟ ತಾತ್ಕಾಲಿಕ ಪ್ರಭುತ್ವಕ್ಕೆ ನಾಯಕತ್ವ ವಹಿಸಿ ಕೊಂಡರು. ವಿಭಜನೆಯ ವಾದವನ್ನು ಬಿಟ್ಟು ಕೊಟ್ಟು, ಪ್ರಭುತ್ವದಲ್ಲಿ ಭಾಗವಹಿಸಿಕೊಳ್ಳು ವಂತೆ ಮುಸ್ಲಿಂ ಲೀಗನ್ನು ಒಪ್ಪಿಸಲು ನೆಹ್ರೂ ಬಹಳ ಪ್ರಯತ್ನಪಟ್ಟರು. ಆದರೂ ಮುಸ್ಲಿಂ ಲೀಗ್ ಅಂಗೀಕರಿಸಲಿಲ್ಲ. ಸ್ವಾತಂತ್ರ್ಯಕ್ಕಾಗಿ ದೊಡ್ಡ ತ್ಯಾಗವನ್ನು ಮಾಡಲು ಭಾರತ ದೇಶವು ಸಿದ್ಧವಾಗತೊಡಗಿತು.

ಪ್ರಪಂಚ ಯುದ್ಧದಲ್ಲಿ ದೊಡ್ಡ ಸೇನಾನಾಯಕ ನಾಗಿ ಪ್ರಸಿದ್ಧಿ ಪಡೆದ ಮೌಂಟ್‌ಬಾಟನ್ ಪ್ರಭು ೧೯೪೭ ನೇ ಸಂವತ್ಸರದಲ್ಲಿ ಭಾರತ ದೇಶಕ್ಕೆ ಗವರ್ನರ್ ಜನರಲ್ ಆದರು. ಅವರೊಂದಿಗೆ ಚರ್ಚೆ ನಡೆಸಿದ ಮೇಲೆ ಭಾರತ ವಿಭಜನೆಗೆ ಭಾರತ ರಾಷ್ಟ್ರೀಯ ಕಾಂಗ್ರೆಸ್ ಒಪ್ಪಿಕೊಳ್ಳುವು ದಾಗಿ ನೆಹ್ರೂ ೧೯೪೭ ನೇ ಸಂವತ್ಸರ ಜೂನ್ ೩ ನೇ ದಿನದಂದು ಪ್ರಕಟಿಸಿದರು. ಆಗಸ್ಟ್ ೧೫ ರಂದು ದೇಶಕ್ಕೆ ಸ್ವಾತಂತ್ರ್ಯವು ಬಂದಿತು.





ಭಾರತ ವಿಭಜನೆಯ ಪರ್ಯವಸಾನವಾಗಿ ಮತಕಲಹಗಳು, ಯುದ್ಧಗಳು, ನಿರಾಶ್ರಿತರು ಮೊದಲಾದ ಸಮಸ್ಯೆಗಳು ತಲೆ ಎತ್ತಿದುವು. ಆದರೂ ಭಾರತೀಯರೆಲ್ಲರೂ ಐಕಮತ್ಯವೇ ತಮ್ಮ ಬಲವೆಂದು ಮನಗಂಡು ಅವರೋಧ ಗಳೆಲ್ಲವನ್ನೂ ಅಧಿಗಮಿಸುತ್ತ, ಹಿಂದೆ ಎಷ್ಟೋ ಶಕ್ತಿಶಾಲಿಯಾಗಿದ್ದ ದೇಶದ, ಒಳ್ಳೆಯ ತನದ ಉಜ್ವಲ ಭವಿಷ್ಯತ್ತಿಗಾಗಿ ಒಟ್ಟು ಕೂಡಿ ಮುಂದಕ್ಕೆ ಸಾಗುತ್ತಿದ್ದಾರೆ.

# ಪ್ರಾಮಾಣಿಕತೆ

**ಕೇ**ದಗೇಕೊಳದ ಜಮೀನ್ದಾರಿಯ ಒಂದು ಗ್ರಾಮದಲ್ಲಿ ಸುಮಾರು ಅರವತ್ತು ವರ್ಷಗಳವರೆಗೆ ಗ್ರಾಮಾಧಿಕಾರಿಯಾಗಿದ್ದವನು, ಎಷ್ಟೋ ಬುದ್ಧಿವಂತನಾಗಿ, ಪ್ರಾಮಾಣಿಕನಾಗಿದ್ದನು. ಒಳ್ಳೆಯ ಹೆಸರು ಪಡೆದ ಅವನು ಥಕ್ಕನೆ ತೀರಿಹೋದ ಮೇಲೆ, ಆ ಗ್ರಾಮಸ್ಥರು ಜಮೀನ್ದಾರರ ಹತ್ತಿರ ಹೋಗಿ, "ನಮ್ಮ ಗ್ರಾಮಾಧಿಕಾರಿಗಳಾಗಿದ್ದ ಗೋಪರಾಜರಿಗೆ ವಾರಸರಿಲ್ಲ. ಆದುದರಿಂದ ತಾವು ಅವರ ಹಾಗೆಯೇ ಒಳ್ಳೆಯ ಪ್ರಾಮಾಣಿಕ ಬುದ್ಧಿಯುಳ್ಳವರನ್ನೇ ಗ್ರಾಮಾಧಿಕಾರಿಯಾಗಿ ನಿಯಮಿಸಬೇಕು ಸ್ವಾಮಿ" ಎಂದರು.

ಜಮೀನ್ದಾರರು ಹಾಗೆಯೇ ಮಾಡುವೆನೆಂದು ಅವರನ್ನು ಕಳುಹಿಸಿ, ದಿವಾನನೊಂದಿಗೆ, "ಯಾರಾದರೂ ಅಧಿಕಾರದಲ್ಲಿರುವಾಗತಾನೇ ಅವನು ಪ್ರಾಮಾಣಿಕನೋ ಅಲ್ಲವೋ ಎಂಬುದು ತಿಳಿಯಬೇಕು. ಒಬ್ಬ ನಿರುದ್ಯೋಗಿಯನ್ನು ಆ ಗ್ರಾಮಕ್ಕೆ ಅಧಿಕಾರಿಯನ್ನಾಗಿ ಮಾಡಿ ಕಳುಹಿಸಿದರೆ ಮುಂದಾಗಿ ಅವನ ಪ್ರಾಮಾಣಿಕತೆ ತಿಳಿಯುವುದು ಹೇಗೆ?" ಎಂದನು.

"ಅದು ನಿಜವೇ" ಎಂದು ದಿವಾನನು, ಕೇದಗೆಕೊಳ ಗ್ರಾಮಕ್ಕೆ ಅಧಿಕಾರಿಯಾಗಲು ತಕ್ಕ ಅರ್ಹತೆಯುಳ್ಳವರು ಅಭ್ಯರ್ಥಿಗಳಾಗಿ ಬರಬೇಕೆಂದು ಸುತ್ತುಮುತ್ತಲೂ ಡಂಗುರ ಸಾರಿಸಿದನು. ಹಾಗೆ ಬರುವವರು ಮುಂದಾಗಿ ಕೋಶಾಧಿಕಾರಿಯನ್ನು ನೋಡಬೇಕೆಂದೂ ತಿಳಿಯಪಡಿಸಿದನು.

ಒಂದು ವಾರದ ಮೇಲೆ ಹತ್ತು ಮಂದಿ ಅಭ್ಯರ್ಥಿಗಳು ಬಂದು ಕೋಶಾಧಿಕಾರಿಯ ದರ್ಶನ ಮಾಡಿದರು. ಅವನು ಬಂದವರನ್ನು ಪ್ರತ್ಯ ಪ್ರತ್ಯೇಕವಾಗಿ ತನ್ನ ಕೋಣೆಗೆ ಕರೆದೊಯ್ದು ಮಾತಾಡಿ, ಮರುದಿನ ಅವರೆಲ್ಲಾ ಹತ್ತು ಗಂಟೆಗೆ ಜಮೀನ್ದಾರರ ಬಳಿಗೆ ಬರಬೇಕೆಂದು ಹೇಳಿ ಕಳುಹಿಸಿದನು. ಅದರಂತೆ ಎಲ್ಲರೂ ಜಮೀನ್ದಾರರ ಬಳಿಗೆ ಬಂದು ಸೇರಿದರು. ಆಗ ದಿವಾನನೂ, ಕೋಶಾಧಿಕಾರಿಯೂ ಅಲ್ಲಿಯೇ ಇದ್ದರು.

ಜಮೀನ್ದಾರರು ಆ ಹತ್ತು ಮಂದಿಯಲ್ಲಿ ಕೋಶಾಧಿಕಾರಿ ತೋರಿಸಿದ ನಾಗವರ್ಮನೆಂಬವನನ್ನು, ಕೇದಗೇಕೊಳದ ಗ್ರಾಮಾಧಿಕಾರಿಯಾಗಿ ನಿಯಮಿಸಿರುವುದಾಗಿ ಹೇಳಿದರು. ಆಗ ಉಳಿದ ಒಂಬತ್ತು ಮಂದಿಗಳೂ, "ಅಯ್ಯೋ! ಇದು ಅನ್ಯಾಯ. ನಮಗೇ ಉದ್ಯೋಗ ಕೊಡುವೆನೆಂದು ಕೋಶಾಧಿಕಾರಿಯವರು ನಮ್ಮೆಲ್ಲರಿಂದ ತಲಾ ನೂರು ವರಹ ತೆಗೆದುಕೊಂಡಿದ್ದಾರೆ!" ಎಂದರು.

ಆಗ ದಿವಾನನು ಅವರನ್ನು ನೋಡಿ, "ಕೋಶಾಧಿಕಾರಿಯ ಮೂಲಕ ಈ ಪರೀಕ್ಷೆ ಇಡಿಸಿದವನು ನಾನೇ. ಗ್ರಾಮಾಧಿಕಾರಿ ಪದವಿಗಾಗಿ ಲಂಚ ಕೊಡುವ ನೀವು, ನಾಳೆ ಆ ಪದವಿಯಲ್ಲಿದ್ದರೆ ಲಂಚ ತೆಗೆದುಕೊಳ್ಳಲಾರಿರೆಂದು ಹೇಗೆ ನಂಬುವುದು? ನಿಮ್ಮಲ್ಲಿ ಪ್ರಾಮಾಣಿಕತೆ ಇಲ್ಲ. ಲಂಚ ಕೊಡಲು ನಿರಾಕರಿಸಿದ ನಾಗವರ್ಮನೇ ಆ ಪದವಿಗೆ ಅರ್ಹನೆನ್ನಲು ಸಂದೇಹವಿಲ್ಲ" ಎಂದನು.





# ಎರಡು ನಗರಗಳು

ಹಿಂದೆ ಒಬ್ಬ ದೊಡ್ಡ ಸಮುದ್ರ ವ್ಯಾಪಾರಿ ಇದ್ದನು. ಅವನ ವಿಶ್ವಾಸದ ಸೇವಕನಾಗಿ ಒಬ್ಬ ಗುಲಾಮನಿದ್ದನು. ಆ ಗುಲಾಮನ ಹೆಸರು ವಾಮಾಂಗ. ತನ್ನ ವ್ಯಾಪಾರದಲ್ಲಿಯೂ ಹಡಗಿನ ಪ್ರಯಾಣದಲ್ಲಿಯೂ ಎಷ್ಟೋ ಸಹಾಯಕನಾಗಿದ್ದು, ತನಗೆ ತುಂಬಾ ಲಾಭ ಬರುವಂತೆ ಮಾಡಿದ ವಾಮಾಂಗನಿಗೆ ಯಜಮಾನನು ಸ್ವೇಚ್ಛೆಯನ್ನು ಕೊಡುತ್ತ, "ನೀನು ನನ್ನ ಹಡಗುಗಳಲ್ಲಿ ಒಂದನ್ನು ತೆಗೆದುಕೊಂಡು, ಸ್ವತಂತ್ರನಾಗಿ ವ್ಯಾಪಾರ ಮಾಡಿ ಚೆನ್ನಾಗಿರು" ಎಂದು ಶುಭಾಶಯ ಹೇಳಿ ಕಳುಹಿಸಿ ಕೊಟ್ಟನು.

ವಾಮಾಂಗನಿಗೆ ಮೊದಲನೇ ವರ್ತಕ ಪ್ರಯಾಣವೇ ಕೂಡಿಬಾರದೆ ಹೋಯಿತು. ಅವನು ಹಡಗಿನಲ್ಲಿ ಸರಕುಗಳನ್ನು ಹಾಕಿಕೊಂಡು ಪ್ರಯಾಣ ಮಾಡುವಾಗ, ನಡುಸಮುದ್ರದಲ್ಲಿ ತುಫಾನು ಎದ್ದು, ಸರಕುಗಳೊಂದಿಗೆ ಸಹಾ ಅವನ ಹಡಗು ಮುಳುಗಿ ಹೋಯಿತು. ನಾವಿಕರೆಲ್ಲರೂ ಸಮುದ್ರದ ಪಾಲಾದರು. ವಾಮಾಂಗನು ಮಾತ್ರ ಹೇಗೋ ಈಜಿಕೊಂಡು ಒಂದು ತೀರವನ್ನು ಸೇರಿಕೊಂಡನು.

ಅದೊಂದು ದ್ವೀಪ ಭೂಮಿಯಾಗಿತ್ತು. ವಾಮಾಂಗನು ದ್ವೀಪದೊಳಗೆ ನಡೆದು, ದೊಡ್ಡದೊಂದು ನಗರದೊಳಗೆ ಪ್ರವೇಶಿಸಿದನು.

ನಗರದ ಬೀದಿಗಳಲ್ಲಿ ಜನಸಮ್ಮರ್ದವು ಹೆಚ್ಚಾಗಿದ್ದಿತು. ಅವರೆಲ್ಲಾ ತನ್ನನ್ನು ನೋಡಿಯೇ ಗುಂಪುಗೂಡಿರುವಂತೆ ವಾಮಾಂಗನಿಗೆ ತೋರಿತು. ಅವನು ಹೋಗುತ್ತಿದ್ದಂತೆ, ಅವರೇ ಅವನ ಸಮೀಪಕ್ಕೆ ಬರುತ್ತಿದ್ದರು. ಅವರೆಲ್ಲರ ಬಾಯಿಗಳಿಂದ "ನಮ್ಮ ಮಹಾರಾಜರಿಗೆ ಜೈ!" ಎಂಬ ನಿನಾದಗಳು ಏಳುತ್ತಿದ್ದುವು. ವಾಮಾಂಗನು ಆಶ್ಚರ್ಯಪಡುತ್ತ "ಇವರು ನನ್ನನ್ನು ನೋಡಿ ಬೇರೊಬ್ಬನೆಂದು ಭ್ರಮೆಪಡುತ್ತಿದ್ದಾರೆ" ಎಂದುಕೊಂಡನು.

ಅವನಿಗೆ ಮುಂದೆ ನಡೆಯಲಾಗದಂತೆ ಜನರು ಸುತ್ತುಮುತ್ತಲೂ ಸೇರಿಕೊಂಡರು. ಅಲಂಕರಿಸಲ್ಪಟ್ಟ ಅಂಬಾರಿಯ ಆನೆಯೊಂದು ಬರಲ್ಪಟ್ಟಿತು.

ಜನರು ವಾಮಾಂಗನನ್ನು ಆನೆಯ ಅಂಬಾರಿಯಲ್ಲಿ ಏರಿಸಿ, ರಾಜಮರ್ಯಾದೆಗಳಿಂದ ರಾಜಭವನಕ್ಕೆ ಕರೆದುಕೊಂಡು ಹೋದರು, ಇದೇನೆಂದು ಅವನು ಕೇಳಿದರೆ, ಅದೆಲ್ಲಾ ಮತ್ತೆ ಹೇಳುತ್ತೇವೆಂದರು.

ರಾಜಭವನದಲ್ಲಿ ಅವನ ಬಟ್ಟೆಬರೆಗಳನ್ನೆಲ್ಲ ತೆಗೆಯಿಸಿ ಒಂದು ಪೆಟ್ಟಿಗೆಯೊಳಗೆ ಭದ್ರಪಡಿಸಿಟ್ಟು, ಅವನಿಗೆ ಸ್ನಾನ ಮಾಡಿಸಿದರು. ಅತ್ಯುತ್ತಮವಾದ ಭೋಜನವಿಡಿಸಿ, ರಾಜೋಚಿತವಾದ ಭೂಷಣಗಳಿಂದ ಅಲಂಕರಿಸಿದರು.

ವಾಮೋಗನು ತನ್ನ ಸುತ್ತಲೂ ಇರುವವರನ್ನು ನೋಡಿ, "ನೀವು ನನ್ನನ್ನು ಹೀಗೆ ರಾಜನಾಗಿ ಮಾಡುವುದರ ಅಂತರಾರ್ಥವೇನು? ನಾನು ನಿಮಗೂ, ನೀವು ನನಗೂ ಅಪರಿಚಿತರು. ಸಮುದ್ರದ ಮೇಲೆ ಪ್ರಯಾಣದಲ್ಲಿ ನನ್ನ ಹಡಗು ಮುಳುಗಿ, ದೈವಿಕವಾಗಿ ನಾನೊಬ್ಬ ಬದುಕಿ ದಡಕ್ಕೆ ಬಿದ್ದೆನು. ಅಷ್ಟೇ ಹೊರತು ಇಲ್ಲಿಗೆ ಬರಬೇಕೆಂದು ಬಂದವನು ನಾನಲ್ಲ" ಎಂದನು.

ಆಗ ಅಲ್ಲಿನವರು ಅವನಿಗೆ ಆ ದೇಶವನ್ನು ಕುರಿತು ಹೇಳಿದರು. ಇಪ್ಪತ್ತೆರಡು ವರ್ಷಗಳ ಹಿಂದಿನವರೆಗೂ ಆ ದ್ವೀಪ ದೇಶದಲ್ಲಿ ಪರಿಪಾಲನೆಯ ಕ್ರಮವೇನೂ ಇರಲಿಲ್ಲ. ಜೀವಿತವೆಲ್ಲವೂ ಅರಾಜಕವಾಗಿಯೇ ನಡೆಯುತ್ತಿತ್ತು. ಆ ಸಮಯದಲ್ಲಿ ಆ ದ್ವೀಪಕ್ಕೆ ಒಬ್ಬ ದೇಶಸಂಚಾರಿ ಬಂದನು. ಒಬ್ಬ ರಾಜನು ಇದ್ದು ಶಾಸನ ಮಾಡಿಕೊಂಡಿರುವನಾದರೆ ಜನರ ಜೀವಿತವು ಕ್ರಮಬದ್ಧವಾಗಿ, ಎಲ್ಲಾ ವಿಧಗಳಲ್ಲಿ ಅಭಿವೃದ್ಧಿಯಾಗುವುದೆಂದೂ, ರಾಜಶಾಸನಗಳ ಮೂಲಕ ಮೇಲಕ್ಕೆ ಬಂದ ಅನೇಕ ದೇಶಗಳಿವೆಯೆಂದೂ ಹೇಳಿದನು. ರಾಜನು ನಿರಂಕುಶನಾಗಿ ಪ್ರಜೆಗಳನ್ನು ಪೀಡಿಸದಂತಿರಲು, ಒಂದು ವರ್ಷವಾದ ಕೂಡಲೇ ಇದ್ದ ರಾಜನನ್ನು ತೊಲಗಿಸಿ ಹೊಸ ರಾಜನನ್ನು ಮಾಡಿಕೊಳ್ಳಬೇಕು. ಅಂತಹ ರಾಜನು ಪ್ರಜೆಗಳಲ್ಲಿ ಒಬ್ಬನಾಗಿರುವುದಕ್ಕಿಂತ ಪರಕೀಯನಾದರೆ ಪರಿಪಾಲನೆ ನಿಷ್ಪಕ್ಷಪಾತವಾಗಿರುತ್ತದೆ. ಹೀಗೆಲ್ಲಾ ಆ ದೇಶಸಂಚಾರಿ ಬೋಧಿಸಿದನು. ಅದು ಎಲ್ಲರಿಗೂ ಹಿಡಿಸಿದುದರಿಂದ, ಅದು ಮೊದಲು ಅಲ್ಲಿನವರು ತಮ್ಮ ದೇಶಕ್ಕೆ ಬರುವ ಪರಕೀಯನೊಬ್ಬನನ್ನು ರಾಜನನ್ನಾಗಿ ಮಾಡಿಕೊಂಡು, ಅವನನ್ನು ಪರಿಪಾಲನೆ ಮಾಡಲು ಬಿಡುತ್ತಾರೆ. ಒಂದು ವರ್ಷ



ಮುಗಿಯುತ್ತಲೇ ಆ ರಾಜನನ್ನು ತೊಲಗಿಸಿ, ಸಮೀಪದಲ್ಲಿರುವ ದ್ವೀಪದ ದಟ್ಟಡವಿಗೆ ಕಳುಹಿಸಿ ಹೊಸಬನಿಗಾಗಿ ಇದಿರು ನೋಡುತ್ತಾರೆ. ಅಡವಿಗೆ ಕಳುಹಿಸಲ್ಪಟ್ಟವನು ಹೇಗೆ ಬದುಕುವನೆಂಬುದರ ಗೊಡವೆ ಅಲ್ಲಿನವರಿಗೆ ಇಲ್ಲ.

ಈ ರೀತಿಯಾಗಿ ಆ ದ್ವೀಪ ದೇಶಕ್ಕೆ ಇಷ್ಟರವರೆಗೆ ಇಪ್ಪತ್ತೆರಡು ಮಂದಿ ರಾಜರಾಗಿ ಹೋದರು. ವಾಮಾಂಗನು ಇಪ್ಪತ್ತ ಮೂರನೆಯ ರಾಜ.

ವಾಮಾಂಗನಿಗೆ ತನಗೆ ಬಂದ ರಾಜಯೋಗವನ್ನು ಕುರಿತು ಸಂತೋಷವಾಗುವುದಕ್ಕೆ ಬದಲು, ವರ್ಷ ಕಳೆದ ಮೇಲೆ ಬರಲಿರುವ ಅರಣ್ಯವಾಸದ ಶ್ರದ್ಧೆ ಹೆಚ್ಚಾಯಿತು. ಅಂತಲೇ ಅವನು ಕೆಲಮಂದಿ ಭಟರನ್ನು ತನ್ನೊಂದಿಗೆ ಕರೆದುಕೊಂಡು ಅರಣ್ಯಕ್ಕೆ ಹೋಗಲು ಬಯಸಿದನು. ಈ ದ್ವೀಪದೇಶದ ಹತ್ತಿರದಲ್ಲಿಯೇ ಮತ್ತೊಂದು ದ್ವೀಪದಲ್ಲಿ ಜನಸಂಚಾರವಿಲ್ಲದ ಆ ದಟ್ಟಡವಿ ಇದ್ದಿತು. ಅಲ್ಲಿಗೆ ಹಡಗಿನಲ್ಲಿಯೋ ದೋಣಿಯಲ್ಲಿಯೋ ಹೋಗಬಹುದು.

ವಾಮಾಂಗನು ಭಟರ ಜತೆಯಲ್ಲಿ ಹಡಗಿನ ಮೂಲಕ ಆ ಅರಣ್ಯಕ್ಕೆ ಹೋದನು. ನಾಲ್ಕೈದು ದಿನಗಳವರೆಗೆ ಅಲ್ಲಿದ್ದು ಅರಣ್ಯವನ್ನು ಆಮೂಲಾಗ್ರವಾಗಿ ಪರಿಶೀಲನೆ ಮಾಡಿದನು. ಅಲ್ಲಿ ಮನುಷ್ಯರು ಜೀವಿಸುವುದು ಕಷ್ಟವೇ. ಈ ಮೊದಲು ರಾಜತ್ವ ಕಳೆದುಕೊಂಡು ಅಲ್ಲಿ ಸೇರಿದವರು ಸತ್ತಿರಬೇಕೆಂದು ಅಲ್ಲಲ್ಲಿ ಕಂಡ ಎಲುವು ಗೂಡುಗಳಿಂದ ಊಹಿಸಬಹುದಾಗಿತ್ತು. ಆದರೆ ಅಲ್ಲಿ ಒಳ್ಳೆಯ ಮರಗಳೂ ಬೆಳೆ ತೆಗೆಯಲು ಸಾರವಂತವಾದ ನೆಲವೂ, ಅಲ್ಲಲ್ಲಿ ಗುಡ್ಡದ ಝರಿಗಳ ನೀರೋಳೆಗಳೂ ಇದ್ದುವು.

ಅಡವಿಯ ಮುಳ್ಳುಪೊದೆ ಮರಗಳನ್ನೆಲ್ಲ ಕಡಿಸಿ ಒಳ್ಳೆಯ ನಗರ ನಿರ್ಮಾಣ ಮಾಡಬಹುದೆಂದೂ, ಹೂ ಹಣ್ಣುಗಳ ತೋಟ ಬೆಳೆಸಬಹುದೆಂದೂ ವಾಮಾಂಗನಿಗೆ ತೋರಿತು.

ಹಾಗೆಯೇ ವಾಮಾಂಗನು ಕೆಲಸ ಮಾಡಲು ಆಳುಗಳನ್ನು ನಿಯಮಿಸಿದನು. ಒಂದು ವರ್ಷದೊಳಗೆ ಅರಣ್ಯವು ತೋಟಗಳಾಗಿ ಮಾರ್ಪಟ್ಟಿತು.

ಅಲ್ಲಲ್ಲಿ ಮನೆಗಳು ಕಟ್ಟಲ್ಪಟ್ಟು ಅದು ನಗರವೇ ಆಯಿತು. ಆ ನಗರವನ್ನು ನಿರ್ಮಿಸಲು ಶ್ರಮಿಸಿದವರು ಈ ಹೊಸ ನಗರದಲ್ಲೇ ಇರಲು ಆಶೆಪಟ್ಟರು.

ವರ್ಷ ಮುಗಿದ ಮೇಲೆ ವಾಮಾಂಗನು ಈ ಹೊಸ ನಗರಕ್ಕೆ ಬಂದುಬಿಟ್ಟನು.

ಇಷ್ಟಾದ ಮೇಲೆ ಹಳೆಯ ನಗರದವರಿಗೆ ವಾಮಾಂಗನನ್ನು ಬಿಡಲು ಮನಸ್ಸಿಲ್ಲದೆ ಹೋಯಿತು. ಅವರು ಒಟ್ಟು ಕೂಡಿ, ಎರಡು ನಗರಗಳಿಗೂ ವಾಮಾಂಗನೇ ಶಾಶ್ವತ ರಾಜನಾಗಿರುವಂತೆ ತೀರ್ಮಾನಿಸಿದರು.





# ಒಳ್ಳೆಯತನ

ಒಂದಾನೊಂದು ಊರಿನಲ್ಲಿ ಸದಾನಂದನೆಂಬ ಒಳ್ಳೆಯವನೊಬ್ಬನಿದ್ದನು. ಅವನ ಮನಸ್ಸಿನಲ್ಲಿ ಕೆಟ್ಟ ಭಾವನೆಗಳೋ ದುಷ್ಟ ಉದ್ದೇಶಗಳೋ ಬರುತ್ತಿರಲಿಲ್ಲ. ಒಂದೇ ಒಂದು ಕೊರತೆಯೇನೆಂದರೆ, ಇತರಿಗೆ ಯಾವ ಹಾನಿಯೂ ಆಗದಂತೆ, ಏನೋ ಬೇಡದ ಮಾತುಗಳನ್ನು ಹೇಳಿ ಆಟಕಟ್ಟಿಸುವುದೆಂದರೆ ಅದೊಂದು ವಿನೋದವಾಗಿತ್ತು. ದಿನಾ ಊರ ಹೊರಗೆ ತನ್ನ ಸ್ನೇಹಿತರೊಂದಿಗೆ ಕೂಡಿಕೊಂಡು, ಬರುವವರನ್ನೂ, ಹೋಗುವವರನ್ನೂ ಏನೋ ಮಾತಾಡಿಸಿ, ಹಾಸ್ಯ ಸಂಭಾಷಣೆಗೆ ಇಳಿಸಿಬಿಡುವನು. ಇದರಿಂದ ಕೆಲವರ ಮನಸ್ಸಿಗೆ ನೋವಾಗುತ್ತಿತ್ತು. ಸಿಟ್ಟುಗೊಳ್ಳುತ್ತಿದ್ದರು. ಬೇಡದ ರಗಳೆ ಕೂಡಾ ಏಳುತ್ತಿತ್ತು. ಕ್ರಮವಾಗಿ ಎಲ್ಲರಿಗೂ ಅವನ ಈ ಗುಣವು ಗೊತ್ತಾದುದರಿಂದ ಸಹಿಸಿ ಸುಮ್ಮನಿರಲು ಕಲಿತರು. ಆ ಸಹನೆಗೆ ಕಾರಣವೇನೆಂದರೆ, ಅವನಿಗೆ ಆ ಊರಿನ ಜಮೀನ್ದಾರರ ಮನೆಯಲ್ಲಿ ಉದ್ಯೋಗ ಸಿಕ್ಕಿದುದೇ. ಜಮೀನ್ದಾರರ ಮನೆಯ ಜಮಾಖರ್ಚುಗಳನ್ನು ನೋಡಿಕೊಳ್ಳುವುದು ಅವನ ಕೆಲಸ. ಆದುದರಿಂದ ಅವನನ್ನು ನೋಡಿದವರ ತಲೆ ತಗ್ಗುತ್ತಿತ್ತು.

ಜಮೀನ್ದಾರರಿಗೆ ಸದಾನಂದನ ಮೇಲೆ ಒಳ್ಳೆಯ ಅಭಿಮಾನವಿದ್ದಿತು, ಈ ವಿಷಯ ಊರಲ್ಲಿರುವವರೆಲ್ಲರಿಗೂ ಗೊತ್ತಾಗಿತ್ತು. ಅಲ್ಲಿ ಕೆಲಸ ಸಿಕ್ಕಿದಂದಿನಿಂದ ಅವನು ಜನರೊಂದಿಗೆ ನಡೆಸುವ ತಮಾಷೆ ಇನ್ನೂ ಹೆಚ್ಚಾಯಿತು.

ಒಂದು ದಿನ ಸಾಯಂಕಾಲ ಸದಾನಂದನು ತನ್ನ ಸ್ನೇಹಿತರೊಂದಿಗೆ ಊರ ಹೊರಗೆ ಕೆರೆಗಟ್ಟೆಯ ಮೇಲೆ ಕುಳಿತುಕೊಂಡಿದ್ದನು. ಆ ಸಮಯದಲ್ಲಿ ಅವನಿಗೆ ದೂರದಲ್ಲಿ ಗಾಡಿಯಿಂದಿಳಿದು ಊರಿನ ಕಡೆಗೇ ಬರುತ್ತಿರುವ ಒಬ್ಬ ಮನುಷ್ಯನು ಕಂಡು ಬಂದನು.

ಆ ಮನುಷ್ಯನು ಸಮೀಪ ಬರುವಾಗ ಸದಾನಂದನು ಅವನನ್ನು ಎಗತಾಳೆಯಾಗಿ ನೋಡಿ ತನ್ನ ಸ್ನೇಹಿತರೊಂದಿಗೆ, "ನಮ್ಮ ಜಮೀನ್ದಾರ್ರ ಮನೆಗೆ ಯಾರೋ ಬಂಧುವೊಬ್ಬ ಬರುವ ಹಾಗಿದೆ. ನಮ್ಮ ಕಡೆಗೇ ಬರುತ್ತಿದ್ದಾನೆ. ಕೇಳಿದರೆ ದಾರಿ ತೋರಿಸಿಬಿಡಿ" ಎಂದನು, ಬರುವವನಿಗೆ ಕೇಳಿಸುವ ಹಾಗೆಯೇ.

ಅಷ್ಟರಲ್ಲಿ ಆ ಮನುಷ್ಯನು ಸದಾನಂದನ ಹತ್ತಿರಕ್ಕೇ ಬಂದು, "ಅಪ್ಪಾ, ನಿನ್ನನ್ನು ನಾನು ನೋಡಲೇ ಇಲ್ಲ.



ನಾನು ಜಮೀನ್ದಾರ್ರ ಮನೆಗೆ ಹೋಗುವವನೆಂದು ನಿನಗೆ ಹೇಗೆ ಗೊತ್ತಾಯಿತು ?" ಎಂದು ಕೇಳಿದನು.

ಸದಾನಂದನು ಗಟ್ಟಿಯಾಗಿ ನಗುತ್ತ, "ಅಯ್ಯೋ! ಅದುವೋ ನಿಮ್ಮ ಸಂದೇಹ ? ಮಲ್ಲಿಗೇ ಹೂವಿನಂತಹ ನಿಮ್ಮ ಬಟ್ಟೆಗಳು, ಬೆಲೆ ಬಾಳುವ ಪಾದರಕ್ಷೆಗಳು, ಅಲ್ಲಿ ಈಗ ತಾನೇ ನೀವು ಬಂದಿಳಿದ ಶ್ರೇಷ್ಠವಾದ ಗಾಡಿ, ಎಲ್ಲಕ್ಕಿಂತ ಹೆಚ್ಚಾಗಿ ನಿಮ್ಮ ಮುಖದ ತೇಜಸ್ಸು, ಇವನ್ನೆಲ್ಲಾ ನೋಡಿದ ಕೂಡಲೇ ಯಾರಿಗಾದರೂ ನೀವು ಜಮೀನ್ದಾರರ ಬಂಧುಗಳೆಂದು ಗೊತ್ತಾಗಿ ಬಿಡುತ್ತದಲ್ಲ ? ಬೇರೆ ಜೋಸ್ಯವೇಕೆ ? ನೋಡಿದ ಕೂಡಲೇ ಇತರರಿಗೆ ಗೊತ್ತಾಗುವಂಥಾದ್ದು ನಿಮಗೆ ಗೊತ್ತಾಗುವುದಿಲ್ಲ ಅಂದರೆ ದೊಡ್ಡ ಆಶ್ಚರ್ಯವೇ ಸರಿ ! ನಿಮ್ಮ ಕಣ್ಣಿಗೇನೂ ಆಗಿಲ್ಲವಷ್ಟೆ ?" ಎಂದನು.

"ಹೌದಪ್ಪ. ನಾನು ಹೊರಟು ಬಂದ ಶ್ರೇಷ್ಠವಾದ ಗಾಡಿಗೆ ಅರ್ಧ ದಾರಿಯಲ್ಲಿ ಚಕ್ರ ಕಿತ್ತುಹೋಯಿತು. ಗಾಡಿಯಿಂದ ಕೆಳಗೆ ಬಿದ್ದುದರಿಂದ ಮಲ್ಲಿಗೆ ಹೂವಿನಂಥ ಬಟ್ಟೆಗಳೆಲ್ಲಾ ಕೊಳೆಯಾದುವು. ಗಾಡಿ ಹೊಡೆಯುವವನನ್ನು ಹಿಂದಕ್ಕೆ ಕಳುಹಿಸಿ ನಾನು ಹೀಗೆ ಬಂದೆನು. ಗಾಡಿಯವನು ಹೋಗಬೇಕಾದ ದಾರಿಯಲ್ಲಿ ಮುಳ್ಳು ಕಲ್ಲುಗಳಿರುವುದರಿಂದ ನನ್ನ ಬೆಲೆ ಬಾಳುವ ಚಪ್ಪಲಿಗಳನ್ನು ಅವನಿಗೇ ಕೊಟ್ಟು ಬಿಟ್ಟೆ. ಆದ್ದರಿಂದ ನೀನು ನನ್ನ ಮುಖದ ತೇಜಸ್ಸು ಮಾತ್ರ ಗುರುತಿಸುವುದೆಂದುಕೊಂಡರೆ, ಮೊತ್ತ ನನ್ನ ಶರೀರ ಪೂರಾ ಗುರುತಿಸಿರುವಿ ! ನಿನ್ನ ಬುದ್ಧಿಗೆ ಮೆಚ್ಚಲೇ ಬೇಕು" ಎಂದನು ಆ ಮನುಷ್ಯ.

"ಹಾಗೇನು ? ಈಗ ನಿಮ್ಮನ್ನು ಹೀಗೆಯೇ ಸೀದಾ ಜಮೀನ್ದಾರ್ರ ಮನೆಗೆ ಕರೆದುಕೊಂಡು ಹೋಗಬಹುದಷ್ಟೆ ?" ಎಂದು ಸದಾನಂದನು ನಗುವನ್ನು ತಡೆದುಕೊಳ್ಳುತ್ತಾ ಹೇಳಿದನು.

"ಈ ವೇಷದಲ್ಲಿ ಅವರನ್ನು ನೋಡುವುದು ಚೆನ್ನಾಗಿರದು. ಮೊದಲು ನನ್ನನ್ನು ಅವರ ಧರ್ಮಛತ್ರದಲ್ಲಿ ಪ್ರವೇಶಗೊಳಿಸಿಬಿಡು, ನನ್ನ ಗಾಡಿಯವನು ಚಕ್ರ ಸರಿಪಡಿಸಿ ಬಂದ ಮೇಲೆ, ಈ ದುಸ್ತುಗಳನ್ನು ಬದಲಾಯಿಸಿಕೊಂಡ ಅನಂತರ ಜಮೀನ್ದಾರ್ರನ್ನು ಹೋಗಿ ನೋಡುತ್ತೇನೆ. ನನಗೆ ಅಷ್ಟು ಅವಸರವೇನಿಲ್ಲ." ಎಂದನು ಆ ಮನುಷ್ಯ.

ಪ್ರಯಾಣಿಕರ ವಸತಿಗಾಗಿ ಜಮೀನ್ದಾರರು ಆ ಊರಿನಲ್ಲಿ ಒಂದು ಧರ್ಮಛತ್ರವನ್ನು ಏರ್ಪಡಿಸಿದ್ದರು. ಅದರಲ್ಲಿ ಎಲ್ಲಾ ಬಗೆಯ ಸದುಪಾಯಗಳಿದ್ದರೂ, ತುಂಬಾ ಬಡವರು ಮಾತ್ರವೇ ಛತ್ರದಲ್ಲಿ ತಂಗುವರು. ಸ್ವಲ್ಪ ಸ್ಥಿತಿವಂತರಾದವರು ಛತ್ರದಲ್ಲಿ ವಾಸಿಸಿದರೆ ಗೌರವ ಕಡಿಮೆ. ಅಲ್ಲಿ ತಂಗುವ ಬಡವರು ಕೂಡಾ, ದಾರಿಯಲ್ಲಿ ತಮಗೆ ಕಳ್ಳರಿಂದ ನಷ್ಟವಾಯಿತೆಂದೋ, ಬೇರೇನಾದರೂ ತೊಂದರೆ ಬಂತೆಂದೋ ಕುಂಟು ನೆವನ ಹೇಳಿಯೇ ಛತ್ರದಲ್ಲಿ ಜಾಗವನ್ನು ಪಡೆದುಕೊಳ್ಳುತ್ತಾರೆ.

ಈ ಮನುಷ್ಯ ಕೂಡಾ ಅಂತಹ ಬಡವರಲ್ಲಿ ಒಬ್ಬನಾಗಿರಬೇಕೆಂದು ಸದಾನಂದನಿಗೆ ತೋರಿತು.

"ನಿಮ್ಮ ಗಾಡಿಯವನು ನಿಮ್ಮ ಮರ್ಯಾದೆಗಳನ್ನೆಲ್ಲಾ ತೆಗೆದುಕೊಂಡು ಎಷ್ಟು ಯುಗಗಳ ಮೇಲೆ ಹಿಂದಿರುಗಿ ಬರುತ್ತಾನೋ ?" ಎಂದು ಸದಾನಂದನು ಎಗತಾಳಿಯಾಗಿಯೇ ಕೇಳಿದನು.

"ಹೇಗೆ ಹೇಳಲಿ ? ಗಾಡಿಯ ಚಕ್ರ ಸರಿಪಡಿಸಬೇಕಷ್ಟೆ ? ಆ ಕೆಲಸ ಮುಗಿಯಲು ಎಷ್ಟು ಕಾಲ ಬೇಕೋ ?" ಎಂದನು ಆ ಮನುಷ್ಯ.

"ಹೋಗಲಿ ಬಿಡಿ. ದುಸ್ತುಗಳು ತಾನೇ ? ನೀವು ಒಪ್ಪುವಿರಾದರೆ ನಮ್ಮ ಗಾಡಿಯವನ ದುಸ್ತು ಕೊಡಿಸುತ್ತೇನೆ. ಬದಲಾಯಿಸಿಕೊಳ್ಳೀರಾ?" ಎಂದನು ಸದಾನಂದ.

ಕೂಡಲೇ ಸದಾನಂದನೊಂದಿಗಿದ್ದ ಹುಡುಗರು ಗೊಳ್ಳನೆ ನಕ್ಕರು.

ಆದರೆ ಆ ಮನುಷ್ಯನು ಯಾವ ಕೋಪವನ್ನೂ ತೋರ್ಪಡಿಸದೆ, "ಹಾಗಾದರೆ ನಿನ್ನ ಮನೆಗೆ ಬರುತ್ತೇನೆ. ಬಟ್ಟೆಗಳನ್ನು ಕೊಡಿಸುವಿಯಾ ?" ಎಂದನು.

ಈ ಪ್ರಶ್ನೆ ಕೇಳಿದ ಕೂಡಲೇ, ಇವನೊಬ್ಬ ಭಿಕ್ಷುಕನೇ ಇರಬೇಕೆಂದುಕೊಂಡ ಸದಾನಂದನು, "ನೀವು ಗಾಡಿಯವನ ಬಟ್ಟೆಗಳನ್ನು ಧರಿಸಿಕೊಂಡರೆ ಜಮೀನ್ದಾರರು ನಿಮಗೆ ದರ್ಶನ ಕೊಡಲಿಕ್ಕೇ ಇಲ್ಲ. ಆಗ ಏನು ಮಾಡುತ್ತೀರಿ ?" ಎಂದನು.

"ಅವರು ನೋಡುವುದು ನನ್ನ ಬಟ್ಟೆಗಳನ್ನಲ್ಲ, ನನ್ನನ್ನು. ನಾವಿಬ್ಬರೂ ಪ್ರಾಣ ಸ್ನೇಹಿತರು" ಎಂದನು ಆತ.

"ಓಹೋ ! ಹಾಗಾದರೆ ಮತ್ತೇನು ? ಹೀಗೆಯೇ ಹೋಗಿ ಅವರನ್ನು ನೋಡಬಹುದಷ್ಟೇ ?" ಎಂದು ನಕ್ಕನು ಸದಾನಂದ,

"ನೋಡಪ್ಪಾ, ಮನುಷ್ಯನು ಪ್ರತಿ ವಿಷಯದಲ್ಲಿಯೂ ಕೆಲವು ಮರ್ಯಾದೆಗಳನ್ನು ಪಾಲಿಸಬೇಕಾಗುತ್ತದೆ. ದೇವರ ಆಲಯದೊಳಗೆ ಹೋಗಬೇಕಾದರೆ ಸ್ನಾನ ಮಾಡಿ, ಶುಚಿಯಾಗಿ, ಪಾದರಕ್ಷೆಗಳನ್ನು ಹೊರಗೆ ಬಿಟ್ಟುಬಿಡಬೇಕು. ಹಾಗೆಯೇ





ಎಷ್ಟು ಸ್ನೇಹಿತರಾದರೂ ದೊಡ್ಡವರ ಮನೆಗೆ ಹೋಗುವಾಗ, ಕಡೇಪಕ್ಷ ಒಗೆದ ಒಳ್ಳೆಯ ಬಟ್ಟೆ ಧರಿಸಬೇಕು. ಸರಿ, ಹೋಗಲಿ, ಮೊದಲು ನನಗೆ ಛತ್ರದ ದಾರಿ ತೋರಿಸಿಬಿಡು, ಸಾಕು" ಎಂದನು ಆ ಮನುಷ್ಯ.

"ಛತ್ರದ ವ್ಯವಹಾರವೆಲ್ಲಾ ನೋಡಿಕೊಳ್ಳುವವನು ನಾನೇ. ಅದರಲ್ಲಿ ಪ್ರವೇಶಿಸಬೇಕಾದರೆ ನಮ್ಮ ಜಮೀನ್ದಾರರು ಕೆಲವು ಷರತ್ತುಗಳನ್ನು ಇಟ್ಟಿದ್ದಾರೆ" ಎಂದನು ಸದಾನಂದ.

"ಅದೆಂಥ ಷರತ್ತುಗಳಪ್ಪಾ?" ಎಂದು ಆ ಮನುಷ್ಯನು ಕೇಳಿದನು.

"ಮೊದಲು ಎಡಗೈಯಿಂದ ಬಲಗಿವಿಯನ್ನೂ, ಬಲಗೈಯಿಂದ ಎಡ ಕಿವಿಯನ್ನೂ ಹಿಡಿದುಕೊಂಡು ಅರವತ್ತು ಸಾರಿ ಗುಂಜು ಕೂತೇಳಬೇಕು. ಆಮೇಲೆ ಅಲ್ಲಿ ಕಾಣುವ ಮರದ ಸುತ್ತಲೂ ನೂರು ಸುತ್ತು ಓಡಬೇಕು. ಅದಾದ ಮೇಲೆ ಯಾವುದಾದರೂ ಎರಡು ಹಾಡು ಹೇಳಬೇಕು" ಎಂದನು ಸದಾನಂದ ಉಕ್ಕುವ ನಗುವನ್ನು ನುಂಗಿಕೊಂಡು.

ಆ ಮನುಷ್ಯನು ಸ್ವಲ್ಪಹೊತ್ತು ಆಲೋಚನೆ ಮಾಡುತ್ತ ಸುಮ್ಮನಿದ್ದು, "ನೀನು ಏನೋ ಕುಶಾಲಿಗೆ ನನ್ನನ್ನು ಆಟವಾಡಿಸಲು ಹೀಗೆಲ್ಲಾ ಹೇಳುವಿಯಾ, ಅಲ್ಲ ಜಮೀನ್ದಾರರು ನಿಜಕ್ಕೂ ಛತ್ರದಲ್ಲಿ ತಂಗುವವರಿಗೆ ಇಂತಹ ಷರತ್ತುಗಳನ್ನು ಇಟ್ಟಿದ್ದಾರೋ?" ಎಂದನು.

"ನಾನು ನಿಮ್ಮ ಹತ್ತಿರ ಸುಳ್ಳು ಹೇಳುವುದಲ್ಲ" ಎಂದು ಸದಾನಂದನು ಹೇಳುತ್ತಿರುವಾಗಲೇ, ಅಕಸ್ಮಾತ್ತಾಗಿ ಜಮೀನ್ದಾರರು ಅಲ್ಲಿಗೇ ಬಂದು, ಸದಾನಂದನ ಮುಂದೆ ನಿಂತಿದ್ದ ಮನುಷ್ಯನನ್ನು ನೋಡಿ, "ಅರೆ! ರತ್ನಾಕರಾ! ಇದೇನು ಹೀಗೆ ಇಲ್ಲಿ ಬಂದು ನಿಂತಿರುವಿ?" ಎಂದರು.

ಫಕ್ಕನೆ ಜಮೀನ್ದಾರರನ್ನು ನೋಡಿ ಸದಾನಂದನ ಬಾಯಿ ಕಟ್ಟಿತು.

"ಹೌದಪ್ಪಾ, ನಾನೇ!" ಎಂದು ಆ ಮನುಷ್ಯನು ತನ್ನ ಗಾಡಿಗೆ ಬಂದ ತೊಂದರೆಯನ್ನು ಹೇಳಿ, "ಈ ವೇಷದಲ್ಲಿ ಹೇಗೆ ನಿನ್ನ ಮನೆಗೆ ಬರಲಿ? ಮೊದಲು ನಿನ್ನ ಛತ್ರದಲ್ಲಿ ಇದ್ದು, ಸಾವಕಾಶವಾಗಿ ಬಟ್ಟೆ ಬದಲಾಯಿಸಿಕೊಂಡು ಆಮೇಲೆ ಬರೋಣವೆಂದುಕೊಂಡಿದ್ದೆ. ಅಷ್ಟರೊಳಗೆ ನೀನೇ ಈ ಕಡೆಗೆ ಬಂದಿ!" ಎಂದನು.

ಜಮೀನ್ದಾರರು ಆ ಮನುಷ್ಯನ ಗುರುತು ಹಿಡಿದುದನ್ನೂ, ಆತ್ಮೀಯನ ಹಾಗೆ ಸಂಬೋಧಿಸುವುದನ್ನೂ ನೋಡಿ ಸದಾನಂದನ ವಿನೋದಭಾವವೆಲ್ಲ ಜರ್ರನೆ ಇಳಿದು ಹೆದರಿ ಗಡಗಡಿಸತೊಡಗಿದನು. ಅವನಿಗೆ ರತ್ನಾಕರನೊಂದಿಗೆ ಮತ್ತೆ ಮಾತಾಡಲು ಅವಕಾಶವಿಲ್ಲದಂತೆ ಜಮೀನ್ದಾರರು, "ಏನಪ್ಪಾ ನೀನು? ನಮ್ಮ ಊರಿಗೆ ಬಂದು ಛತ್ರದಲ್ಲಿ ತಂಗುವುದೆಂದರೇನು! ಚೆನ್ನಾಗಿದೆ, ಬಾ, ಮನೆಗೆ ಹೋಗೋಣ"

ಎಂದು ಅವನ ಕೈಯನ್ನು ಹಿಡಿದು ಸಲಿಗೆ ತೋರಿಸುತ್ತ ಮನೆಗೆ ಕರೆದುಕೊಂಡು ಹೋದರು.

ಭೀತಿ ತುಂಬಿದವನಾದ ಸದಾನಂದನು ಮರುದಿನ ಜಮೀನ್ದಾರರ ಮನೆಗೆ ಹೋಗಲಿಲ್ಲ. ತನ್ನ ಆರೋಗ್ಯ ಚೆನ್ನಾಗಿಲ್ಲವೆಂದು ಸಮಾಚಾರ ಕಳುಹಿಸಿದನು. ಆದರೆ ಸ್ವಲ್ಪ ಹೊತ್ತಿಗೆ ರತ್ನಾಕರನೇ ಸದಾನಂದನ ಮನೆಗೆ ಬಂದನು.

ಅವನನ್ನು ನೋಡಿದ ಕೂಡಲೇ ಸದಾನಂದನು ವಿಪರೀತವಾಗಿ ಹೆದರಿ, "ಅಯ್ಯಾ! ನೀವು ನನ್ನನ್ನು ಕ್ಷಮಿಸಬೇಕು!" ಎಂದು ಗದ್ಗದ ಸ್ವರದಿಂದ ಹೇಳುತ್ತಾ ಕೈಮುಗಿದನು.

"ಕ್ಷಮಿಸಲಿಕ್ಕೆ ಏನಾಗಿದೆ?" ಎಂದು ರತ್ನಾಕರನು ಸ್ವಲ್ಪ ತಾಳಿ, "ಅಲ್ಲಪ್ಪಾ, ನಾನು ನಿಜ ತಿಳಿಯೋಣವೆಂತಲೇ ಬಂದೆ. ಬಡವರಾರಾದರೂ ಛತ್ರದಲ್ಲಿ ಸೇರಲು ಬಂದರೆ, ನೀನು ಹೇಳಿದ ಷರತ್ತುಗಳನ್ನು ಆಚರಿಸಬೇಕೆಂದೆಯಲ್ಲಾ? ನಿಜ ಹೇಳು. ಛತ್ರದಲ್ಲಿ ತಂಗಲು ಬರುವವರಲ್ಲಿ ವೃದ್ಧರೂ, ಬಲಹೀನರೂ, ವಿಕಲಾಂಗರೂ ಇರಬಹುದು, ಈ ಬಗೆಯ ಅಮಾನುಷವಾದ ಷರತ್ತುಗಳಿದ್ದರೆ ಅವುಗಳಿಂದ ಏನು ಲಾಭವೋ ತಿಳಿಯದಾಗಿದೆ. ಜಮೀನ್ದಾರ್ರ ಹತ್ತಿರ ಹೇಳಿ, ತೊಲಗಿಸಬೇಕು. ಅದಕ್ಕೇ ಕೇಳುತ್ತೇನೆ" ಎಂದನು. ಸದಾನಂದನು ಆ ಮಾತಿನಿಂದ ಎಚ್ಚರಕ್ಕೆ ಬಂದು ಆಶ್ಚರ್ಯಪಡುತ್ತ, "ಜಮೀನ್ದಾರರು ನಿಮಗೆ ತೀರಾ ಹತ್ತಿರದವರು ತಾನೇ? ಇದನ್ನು ನನ್ನ ಹತ್ತಿರವೇ ಕೇಳಲು ಏಕೆ ಬಂದಿರಿ? ಅವರ ಹತ್ತಿರ ಕೇಳಲಿಲ್ಲವೆ?" ಎಂದನು.

ರತ್ನಾಕರನು ನಕ್ಕು, "ನನ್ನನ್ನು ಆಟವಾಡಿಸಿ ವಿನೋದಿಸಲು ನೀನು ಸುಳ್ಳು ಹೇಳಿರಬಹುದೆಂದು ನನಗೆ ತೋರಿತು. ನಿನ್ನ ಮಾತು ಸುಳ್ಳೇ ಆದರೂ, ನಾನು ಇದನ್ನು ಜಮೀನ್ದಾರ್ರ ಹತ್ತಿರ ಕೇಳಿದ್ದರೆ, ಅವರಿಗೆ ನಿನ್ನ ಮೇಲೆ ಸಿಟ್ಟು ಬಂದು, ನಿನ್ನನ್ನು ಕೆಲಸದಿಂದಲೇ ತೆಗೆದುಹಾಕಿ, ಕಠಿಣವಾಗಿ ಶಿಕ್ಷಿಸಲಿಕ್ಕೂ ಸಾಕು. ಹಾಗಾಗುವುದು ನನಗೆ ಇಷ್ಟವಿಲ್ಲ. ನಿನ್ನ ಮಾತು ಸುಳ್ಳೋ ಸತ್ಯವೋ ಅಂತ ನಿನ್ನಿಂದಲೇ ತಿಳಿದರೆ ನಿನಗೇ ಕ್ಷೇಮ" ಎಂದನು.

ರತ್ನಾಕರನ ಒಳ್ಳೆಯತನವು ಸದಾನಂದನಿಗೆ ಅರ್ಥವಾಯಿತು. ಅವನಿಗೆ ತನ್ನ ಪರಿಚಯ ಸ್ವಲ್ಪವೂ ಇಲ್ಲದೆ ಹೋದರೂ, ಏನೇನೋ ಅಪಹಾಸ್ಯ ಮಾಡಿದ ತನಗೆ ಜಮೀನ್ದಾರರಿಂದ ಕೆಡುಕಾಗಬಾರದೆಂದು ಎಚ್ಚರಿಕೆ ವಹಿಸಿದ್ದಾನೆ!

ಸದಾನಂದನು ತನ್ನ ತಪ್ಪನ್ನು ಆತನ ಮುಂದೆ ಒಪ್ಪಿಕೊಂಡು ನಮಸ್ಕಾರ ಮಾಡಿದನು. ಆಮೇಲೆ ವಿನೋದಕ್ಕಾಗಿ ಅವನು ಯಾರನ್ನೂ ನೋಯಿಸುವಂತೆ ಹೇಳುವುದನ್ನು ಬಿಟ್ಟುಬಿಟ್ಟನು.





# ದಿವಾನನ ಪರೀಕ್ಷೆ

ಹಿಂದೆ ವೀರವರದ ಜಮೀನುದಾರರಿಗೆ ಕುದುರೇ ಸವಾರಿಯೂ, ಮಲ್ಲವಿದ್ಯೆಯೂ ಎಲ್ಲಕ್ಕಿಂತ ಹೆಚ್ಚು ಇಷ್ಟವಾಗಿತ್ತು. ಅವರು ತನ್ನ ಜಮೀನುದಾರೀ ಗ್ರಾಮಗಳಲ್ಲಿ ಗರಡೀ ಮನೆಗಳನ್ನೂ, ವ್ಯಾಯಾಮ ಶಾಲೆಗಳನ್ನೂ ಏರ್ಪಡಿಸಿದ್ದರು.

ಎಲ್ಲರೂ ವೀರ ಧೀರರಾಗಿರಬೇಕೆಂಬುದು ಅವರ ಆಶಯ. ಆದರೆ ಎಲ್ಲಿಯೂ ಅವರ ದಿವಾನದ ಖರ್ಚಿನಿಂದ ನಡೆಯುವ ಪಾಠಶಾಲೆಗಳು ಮಾತ್ರ ಇರಲೇ ಇಲ್ಲ.

ಆ ಜಮೀನುದಾರರು ಒಂದುಸಾರಿ ಸಮೀಪದಲ್ಲಿದ್ದ ಗೋಪವರದ ಜಮೀನುದಾರರನ್ನು ನೋಡಲು ಹೋದರು. ಅವರೊಂದಿಗೆ ಆ ಜಮೀನುದಾರಿಕೆಯ ಅನೇಕ ಗ್ರಾಮಗಳನ್ನು ತಿರುಗಾಡಿದರು. ಅಲ್ಲಿ ಪ್ರತಿ ಗ್ರಾಮದಲ್ಲಿಯೂ ಪಾಠಶಾಲೆ ಇದ್ದಿತು. ಬಾಲ ಬಾಲಿಕೆಯರು ಅಲ್ಲಿ ಪಾಠ ಕಲಿಯುವ ರೀತಿ ಬಹಳ ಚೆನ್ನಾಗಿದ್ದಿತು, ಗೋಪವರದ ಜಮೀನುದಾರರು ಗ್ರಾಮಸ್ಥರ ವಿದ್ಯೆಯ ಮೇಲೆ ತೋರಿಸುವ ಶ್ರದ್ಧೆ ವೀರವರದ ಜಮೀನುದಾರರನ್ನು ಬಹಳವಾಗಿ ಆಕರ್ಷಿಸಿತು.

ಅವರು ತನ್ನ ಊರಿಗೆ ಹಿಂದಿರುಗಿ ಬಂದ ಕೂಡಲೇ ತನ್ನ ದಿವಾನನನ್ನು ಕರೆದು "ನಾವು ಕೂಡಾ ನಮ್ಮ ಎಲ್ಲಾ ಗ್ರಾಮಗಳಲ್ಲಿಯೂ, ಗೋಪವರದ ಹಾಗೆ, ಮಕ್ಕಳ ಓದಿಗಾಗಿ ಪಾಠಶಾಲೆಗಳನ್ನು ಏರ್ಪಾಡು ಮಾಡಬೇಕಾದುದು ಅತೀ ಅಗತ್ಯ. ಆ ವಿಷಯದಲ್ಲಿ ಆಗುವ ಖರ್ಚುಗಳಿಗೆ ಹೆದರಬಾರದು. ಬೇಗದಲ್ಲೇ ಪಾಠಶಾಲೆಗಳನ್ನು ಸ್ಥಾಪಿಸಿ ತಕ್ಕವರನ್ನು ನೋಡಿ ಉಪಾಧ್ಯಾಯರನ್ನು ನಿಯಮಿಸಿಬಿಡಿರಿ" ಎಂದು ಹೇಳಿದರು.

ದಿವಾನನಿಗೆ ಹಣದ ಖರ್ಚು ಎಂದರೆ ಭಯವೇ. ಅದರ ಮೇಲೆ ಅವನಿಗೆ ಜಮೀನುದಾರರ ಹಾಗೆಯೇ ಬೇಟೆ, ಕುದುರೆ ಸವಾರಿ, ಮಲ್ಲ ವಿದ್ಯೆಗಳ ಮೇಲೆಯೇ ಹೆಚ್ಚಿನ ಆಸಕ್ತಿ. ಆದರೂ ಜಮೀನುದಾರರ ಆಜ್ಞೆಯಾದುದರಿಂದ ಪ್ರತಿ ಗ್ರಾಮದಲ್ಲಿಯೂ ಪಾಠಶಾಲೆಗಳಿಗಾಗಿ ತಕ್ಕ ಸ್ಥಳವನ್ನು ಗೊತ್ತು ಮಾಡಿಸಿದನು. ಇನ್ನು ಉಪಾಧ್ಯಾಯರ ನಿಯಮನವು ಒಂದು ಸಮಸ್ಯೆಯಾಗಿ ಇದಿರಾಯಿತು.

ದಿವಾನನು ಈ ವಿಷಯವನ್ನು ಜಮೀನುದಾರರೊಂದಿಗೆ ಚರ್ಚಿಸಿದನು. ಈಗ ವ್ಯಾಯಾಮ ಶಾಲೆ

ಜೆ. ಸರಸ್ವತಿ

ಗಳಿಗೆ ಮುಖ್ಯಸ್ಥರಾಗಿರುವವರು ಹಗಲಿನಲ್ಲಿ ಮಕ್ಕಳಿಗೆ ವಿದ್ಯೆಗಳನ್ನು ಬೋಧಿಸಬೇಕು. ಹೊತ್ತು ಮುಳುಗಿದ ಮೇಲೆ, ವ್ಯಾಯಾಮ ಶಾಲೆಗಳಲ್ಲಿ ಮಲ್ಲ ವಿದ್ಯೆ ಕಲಿಸಬೇಕು. ಆಗ ಹೊಸ ಉಪಾಧ್ಯಾಯರ ಅಗತ್ಯ ಬೀಳುವುದಿಲ್ಲ, ಹೀಗೆ ಅವರ ಚರ್ಚೆಯಲ್ಲಿ ನಿರ್ಣಯವಾಯಿತು.

ಅದರಂತೆ ಜಮೀನುದಾರರ ಅಪ್ಪಣೆ ಎಲ್ಲಾ ವ್ಯಾಯಾಮ ಶಾಲೆಗಳ ಮುಖ್ಯೋಪಾಧ್ಯಾಯರಿಗೂ ಹೋಯಿತು. ವೀರವರ ಜಮೀನುದಾರಿಕೆಯ ಎಲ್ಲಾ ಗ್ರಾಮಗಳಲ್ಲಿಯೂ ಪಾಠಶಾಲೆಗಳು ಏರ್ಪಟ್ಟವು. ಒಂದು ವರ್ಷ ಕಳೆದ ಮೇಲೆ, ಹೊಸತಾಗಿ ಸ್ಥಾಪಿಸಿದ ಪಾಠಶಾಲೆಗಳು ಹೇಗೆ ನಡೆಯುತ್ತವೆಂಬುದನ್ನು ನೋಡಿ ತನಿಖೆ ನಡೆಸಿ ತನಗೆ ತಿಳಿಸಬೇಕೆಂದು ಜಮೀನುದಾರರು ದಿವಾನನ್ನು ಕಳುಹಿಸಿದರು.



ದಿವಾನನು ಮೊದಲು ಗೋಳೀ ಹಳ್ಳಿ ಎಂಬ ಗ್ರಾಮದ ಪಾಠಶಾಲೆಗೆ ಹೋದನು. ಆಗ ತರಗತಿಯಲ್ಲಿ ಅನೇಕ ಮಂದಿ ಮಕ್ಕಳು ಕುಳಿತಿದ್ದರು. ಕೆಲವು ಮಕ್ಕಳು ಏನೋ ಆಟಗಳಲ್ಲಿದ್ದರು. ಮತ್ತೆ ಕೆಲವು ಮಕ್ಕಳು ತೂಕಡಿಸುತ್ತಿದ್ದರು. ಉಪಾಧ್ಯಾಯನೂ ತನ್ನ ಆಸನದಲ್ಲಿ ಒರಗಿ ಕಣ್ಣು ಮುಚ್ಚಿಕೊಂಡಿದ್ದನು. ಆಡುವ ಹುಡುಗರ ಗಲಾಟೆಗೂ ಅವನಿಗೆ ಎಚ್ಚರವಿಲ್ಲ.

ಅದನ್ನು ನೋಡುವ ದಿವಾನನಿಗೆ ಮೈ ಪೂರಾ ಉರಿಯಿತು, ಅವನು ತೂಕಡಿಸುತ್ತಿದ್ದ ಒಬ್ಬ ಹುಡುಗನನ್ನು ಎಬ್ಬಿಸಿ, ಕೋಪದಿಂದ, "ನೀವು ವಿದ್ಯೆ ಕಲಿಯುವ ರೀತಿ ಇದೇನಾ? ಇಷ್ಟರವರೆಗೆ ನಿಮಗೆ ಎಷ್ಟು ವಿದ್ಯೆ ಬಂದಿದೆಯೋ ನೋಡುತ್ತೇನೆ" ಎಂದು ಇನ್ನೊಬ್ಬ ಹುಡುಗನನ್ನು ನೋಡಿ, "ರಾಮಾಯಣ ಭಾರತಗಳನ್ನು ಯಾರು ಬರೆದರು?" ಎಂದು ಪ್ರಶ್ನಿಸಿದನು.

ಈ ಮೊದಲು ದಿವಾನನನ್ನು ಆ ಗ್ರಾಮದಲ್ಲಿ ನೋಡಿದ್ದುದರಿಂದ ಎಲ್ಲರೂ ಅವರಿಗೆ ಹೆದರುತ್ತಾರೆಂದು ಹುಡುಗರಿಗೆಲ್ಲ ಗೊತ್ತಿತ್ತು. ಅಂತಲೇ ಆ ಹುಡುಗ ತುಂಬ ಹೆದರಿ, "ಹೊಡೀಬೇಡ್ರೀ! ಅದೆಲ್ಲ ಬರೆದದ್ದು ನಾನಲ್ಲಾ" ಎಂದನು.

ಅದನ್ನು ಕೇಳಿದ ದಿವಾನನು ಸೀದಾ ಒಬ್ಬ ಉಪಾಧ್ಯಾಯನ ಬಳಿಗೆ ಹೋಗಿ ಅವನನ್ನು ತಟ್ಟಿ ಎಬ್ಬಿಸಿ, "ಇದೋ ನೀನು ಪಾಠ ಕಲಿಸುವ ಚೆಂದ? ನಿನ್ನ ವಿದ್ಯಾರ್ಥಿಯೊಬ್ಬನ ಹತ್ತಿರ ರಾಮಾಯಣ ಭಾರತ ಯಾರು ಬರೆದರೆಂದು ಕೇಳಿದರೆ ನಾನಲ್ಲವೆನ್ನುತ್ತಾನೆ, ಏನಿದು ?" ಎಂದನು.

ದಿವಾನನನ್ನು ನೋಡಿದ ಕೂಡಲೇ ಉಪಾಧ್ಯಾಯನ ನಿದ್ದೆಯ ಮತ್ತು ಬಿಟ್ಟುಹೋಯಿತು. ಅವನು ಕೈಜೋಡಿಸಿ ದಿವಾನನಿಗೆ ನಮಸ್ಕರಿಸುತ್ತ, "ಅಯ್ಯಾ ಕ್ಷಮಿಸಬೇಕು. ಅವನು ನಿದ್ದೆ ಮತ್ತಿನಲ್ಲಿ ಏನೋ ಹೇಳಿರಬೇಕು. ಬಹುಶಃ ಅವನೇ ಅವುಗಳನ್ನು ಬರೆದಿರಬೇಕು. ನಾನು ನೋಡಿ ಇನ್ನು ಹಾಗೆಲ್ಲಾ ಬರೀಬಾರದು ಅಂತ ಖಂಡಿಸುತ್ತೇನೆ ಸ್ವಾಮಿ". ಎಂದನು.

ಇದನ್ನು ಕೇಳಿ ದಿವಾನನು ಇನ್ನಷ್ಟು ಕೋಪದಿಂದ, ಬೇಗಬೇಗನೇ ಪ್ರಧಾನೋಪಾಧ್ಯಾಯನ ಕೋಣೆಗೆ ಹೋಗಿ, "ಪಾಠಶಾಲೆ ಇಷ್ಟು ಅಧ್ವಾನ್ನವಾಗಿ ನಡೆಯುತ್ತದೆಂದು ನಾನು ಅಂದುಕೊಳ್ಳಲಿಲ್ಲ. ಇದಕ್ಕೆ ನಿನ್ನ ಸಮಾಜಾಯಿಷಿ ಏನಯ್ಯ?" ಎಂದು ಕೇಳಿದನು.

ಪ್ರಧಾನೋಪಾಧ್ಯಾಯನು ಗಾಬರಿಯಾಗಿ "ತಾವು ಅನ್ಯಥಾ ಭಾವಿಸಬಾರದು. ಈ ಹಳ್ಳಿಯಲ್ಲಿರುವವರೆಂದರೆ, ಶಾಲೆಯಲ್ಲಿ ಮಕ್ಕಳಿಗೆ ಪಾಠಗಳನ್ನು ಹೇಳುವಾಗ, ನಾವೇನಾದರೂ ಗಟ್ಟಿಯಾಗಿ ಕೋಪ ತೋರಿಸಿಬಿಟ್ಟರೆ ಹುಡುಗರನ್ನು ಶಾಲೆಗೆ ಕಳುಹಿಸುವುದಿಲ್ಲ. ಮತ್ತೊಂದು, ತಾವು ಕೇಳಿದ ಅಷ್ಟೊಂದು ಕಠಿಣವಾದ ಪ್ರಶ್ನೆಗೆ ಈ ಸಣ್ಣ ಸಣ್ಣ ಮೊದ್ದು ಮಕ್ಕಳು ಏನು ಸಮಾಧಾನ ಹೇಳಬಲ್ಲರು ? ಈಗ ತಾವು ಮಾಡಿದ ಪ್ರಶ್ನೆ ನನಗೂ ಕುತೂಹಲ ಹುಟ್ಟಿಸಿದೆ. ಈ ಪ್ರಶ್ನೇನ ಪಾಠದ ಪಟ್ಟಿಯಲ್ಲಿ ಸೇರಿಸುತ್ತೇನೆ. ರಾಮಾಯಣ, ಭಾರತಗಳನ್ನು ತಾವೋ, ಜಮೀನ್ದಾರರೋ ಬರೆದಿರಬೇಕೆಂದು ಕಾಣುತ್ತದೆ..." ಎಂದುದನ್ನು ಕೇಳಿ, ದಿವಾನನು "ಛೆಕ್ !" ಎನ್ನುತ್ತ ಕೋಪಾವೇಶದಿಂದ ಧಡಧಡನೆ ಹೊರಟುಹೋದನು.

ಅವನು ಸೀದಾ ಜಮೀನುದಾರರ ಬಳಿಗೆ ಬಂದು, "ನಾನು ಹೋಗಿ ಗೋಳಿಹಳ್ಳಿಯ ಪಾಠಶಾಲೆಯನ್ನು ನೋಡಿದೆ. ಆ ಶಾಲೆಯ ಪರಿಸ್ಥಿತಿ ಏನೇನೂ ಚೆನ್ನಾಗಿಲ್ಲ. ಉಪಾಧ್ಯಾಯನಿಗೂ ಪ್ರಧಾನೋಪಾಧ್ಯಾಯನಿಗೂ ವ್ಯತ್ಯಾಸವೇ ಇಲ್ಲ. ರಾಮಾಯಣ, ಭಾರತಗಳನ್ನು ಯಾರು ಬರೆದರೆಂದು ಒಂದು ಪ್ರಶ್ನೆ ಮಾಡಿದರೆ, ಹುಡುಗರಿಗೆ ಬಿಟ್ಟು ಉಪಾಧ್ಯಾಯರಿಗೂ ಹೇಳಲಿಕ್ಕಾಗಲಿಲ್ಲ. ಬೇರೆ ಗ್ರಾಮಗಳಿಗೆ ಹೋಗಲಿಕ್ಕೇ ಮನಸ್ಸು ಬಾರದೆ ಸೀದಾ ಬಂದುಬಿಟ್ಟೆ" ಎಂದನು.

ಜಮೀನುದಾರರು ದಿವಾನನ ಮೇಲೆ ಬಹಳ ಸಹಾನುಭೂತಿ ಉಳ್ಳವರಾಗಿ, "ಎಷ್ಟಾದರೂ ಪಾಪದ ಜನರು. ನೀವು ಸ್ವಲ್ಪ ಸಹನೆ ವಹಿಸಿ ಎಲ್ಲಾ ಗ್ರಾಮಗಳಿಗೂ ಹೋಗಿ, ಅಲ್ಲಿಯ ಪಾಠಶಾಲೆಗಳ ಲೋಪಗಳನ್ನು ಸರಿಪಡಿಸಬೇಕು. ನೀವು ಕೇಳಿದ ಪ್ರಶ್ನೆ ಅಮೋಘವಾಗಿದೆ, ರಾಮಾಯಣ, ಭಾರತವೆಂದು ಎಲ್ಲರೂ ಹೇಳುವುದನ್ನು ಕೇಳಿದ್ದೇನೆ. ಬರೆದವರಾರೆಂಬುದು ಮುಖ್ಯ ಪ್ರಶ್ನೆಯೇ ! ನಿಮ್ಮ ಜತೆಯಲ್ಲಿ ಇನ್ನಿಬ್ಬರು ಸಹಾಯಕರನ್ನೂ ಕಳುಹಿಸುತ್ತೇನೆ. ಬೇಟೆ ನಾಯಿಗಳ ಭರಮನೂ, ಕುದುರೆಗಳನ್ನು ನೋಡಿಕೊಳ್ಳುವ ವೀರಭದ್ರನೂ ನಿಮ್ಮೊಂದಿಗೆ ಬಂದು, ತಕ್ಕ ಪ್ರಶ್ನೆಗಳನ್ನು ಕೇಳಲಿ. ಇದಕ್ಕಾಗಿ ಲಕ್ಷ ರೂಪಾಯಿ ಮಂಜೂರು ಮಾಡುತ್ತೇನೆ" ಎಂದನು. ದಿವಾನನು ತೃಪ್ತಿಯಿಂದ ಶಾಂತನಾದನು.






ಅಹಿಂಸೆಯ ಧರ್ಮದಿಂದ, ಶಾಂತಿಯುತವಾಗಿ ಕುಲ ವರ್ಗ ಭೇದವಿಲ್ಲದಂತಹ ಮಾನವ ಸಮಾಜವು ಏರ್ಪಡುವ ನೀತಿಯ ಫಲಗಳು ತುಂಬಿದ ಬೌದ್ಧ ಧರ್ಮವೆಂಬ ಮಹಾ ವೃಕ್ಷವು, ಪ್ರಪಂಚವೆಲ್ಲಾ ತನ್ನ ನೆರಳನ್ನು ಹಾಯಿಸಿಕೊಂಡು ಹೋಯಿತು.

ಜೀವಕೋಟಿಗಳನ್ನು ಉದ್ಧರಿಸುವ ಕರುಣಾ ಮೂರ್ತಿಯಾಗಿ ಅವತರಿಸಿದ ಬುದ್ಧನು "ತಥಾಗತ"ನೆಂದು, "ಬೋಧಿಸತ್ವ"ನೆಂದು, ಭಗವಾನನೆಂದು ಕೀರ್ತಿಸಲ್ಪಟ್ಟು ಬುದ್ಧನ ಔನ್ನತ್ಯವು ಹಿಮಾಲಯದ ಹಾಗೆ ಬೆಳೆಯುತ್ತಿದ್ದಿತು.

ಹೀಗಿದ್ದರೂ ಬುದ್ಧನ ಆಜನ್ಮ ವೈರಿಯಾದ ದೇವದತ್ತನ ಅಸೂಯಾದ್ವೇಷಗಳು ಇನ್ನಷ್ಟು ಹೆಚ್ಚಾಗಿ ಬೆಳೆಯುತ್ತಲೇ ಇದ್ದುವು. ಒಳಿತು ಎಷ್ಟೇ ಹೆಚ್ಚಾಗಿದ್ದರೂ ಕೆಡುಕು ಕೂಡಾ ಹಾಗೆಯೇ ಬೆಳೆಯುತ್ತದೆನ್ನಲು ಇದೇ ಸಾಕ್ಷಿ. ಪ್ರಪಂಚ ಗಮನಕ್ಕೆ ರಾತ್ರಿ ಹಗಲುಗಳಂತೆ ಅವೆರಡೂ ಬೇಕೇ ಬೇಕಾಗುತ್ತವೆ. ಆದರೆ ಮಿತಿಮೀರುವ ಗುಣವುಳ್ಳ ಕೆಡುಕು ಅತಿರೇಕವಾದಾಗಲೇ ಅವುಗಳನ್ನು ಅಡಗಿಸಲು ಭಗವಾನನು ಅವತಾರ ಎತ್ತುತ್ತಾನೆ.

ಬುದ್ಧನು ತನ್ನ ವೃದ್ಧಾಪ್ಯದಲ್ಲಿ ಕೂಡಾ ಒಂದೇ ದೀಕ್ಷೆಯಿಂದ ಊರಿಂದೂರಿಗೆ ತಿರುಗುತ್ತ, ಮಾನವ ಸಮಾಜದ ಹೀನಕುಲದವರನ್ನು, ನಿರ್ಭಾಗ್ಯರನ್ನು, ಅಗ್ರವರ್ಣದವರೆಂದು ಬೀಗಿಕೊಂಡಿರುವವರಿಂದಾಗುವ ಅನೀತಿ, ಅಕ್ರಮ, ಅವಮಾನಗಳಿಗೆ ಗುರಿಯಾಗುವ, ದೀನದಳಿತರನ್ನು, ತನ್ನ ದಿವ್ಯ ಪ್ರಬೋಧಗಳಿಂದ ಸಂಸ್ಕಾರವಂತರಾಗುವಂತೆ ಮಾಡುತ್ತಾ, ತನ್ನ ಶಿಷ್ಯರನ್ನಾಗಿ ಮಾಡಿಕೊಳ್ಳುತ್ತಿದ್ದನು. ಇದೆಲ್ಲವೂ ತನ್ನ ಕಕ್ಷಿಯನ್ನು ಸಾಧಿಸಲು ದೇವದತ್ತನಿಗೆ ಒಳ್ಳೆಯ ಅವಕಾಶವಾಗಿ ತೋರಿತು.

ಎಷ್ಟು ಒಳಿತು ನಡೆದರೂ ಅದಕ್ಕೆ ವಿರೋಧಿಗಳಾದವರು ಇಲ್ಲದೆ ಹೋಗುವುದಿಲ್ಲವಷ್ಟೆ? ದೇವದತ್ತನು ಅಂತಹವರನ್ನೆಲ್ಲಾ ಒಂದುಗೂಡಿಸಿ ಅನೇಕ ಪ್ರತಿಭಟನೆಗಳನ್ನೂ, ತಂತ್ರಗಳನ್ನೂ ಮಾಡತೊಡಗಿದನು.

## ೨೪. ಕಲ್ಕಿಯ ಅವತಾರ



ದೇವದತ್ತನು ಬುದ್ಧನನ್ನು ನೇರಾಗಿ ಸಂಧಿಸಿ, "ನೀನು ಪುಣ್ಯಪದ್ಧತಿಗಳಾದ ಯಜ್ಞ ಯಾಗಾದಿಗಳನ್ನು ನಿಲ್ಲಿಸಿ, ಅಹಿಂಸೆಯನ್ನು ಬೋಧಿಸುವುದೇನೋ ಚೆನ್ನಾಗಿದೆ. ಆದರೆ ಬೌದ್ಧ ಭಿಕ್ಷುಗಳು ಮಾಂಸಾಹಾರವನ್ನು ಮುಟ್ಟಬಾರದೆಂದೂ, ಬೌದ್ಧ ಧರ್ಮವನ್ನು ಸ್ವೀಕರಿಸಿ ನಿನ್ನ ಶಿಷ್ಯರಾದವರು ಆಹಾರ ನಿಯಮವನ್ನು ಪಾಲಿಸಬೇಕೆಂದೂ ಕಟ್ಟುಪಾಡು ಮಾಡಲು ನಿನ್ನಿಂದಾದೀತೆ? ಅದು ನಿನ್ನ ಕೈ ಮೀರಿದ ವಿಷಯಗಳೆಂದು ನಿನಗೇಕೆ ಗೊತ್ತಾಗುವುದಿಲ್ಲ?" ಎಂದು ಕೇಳಿದನು.

ಬುದ್ಧನು ಅವನನ್ನು ನೋಡಿ, "ಅಪ್ಪಾ ದೇವದತ್ತಾ! ಬೌದ್ಧ ಧರ್ಮಾವಲಂಬಿಗಳಾಗುವವರು ಅಹಿಂಸೆಯನ್ನು ಅವಲಂಬಿಸಬೇಕೆಂದು ಢಾಣಾ ಡಂಗುರವಾಗಿ ಹೇಳುತ್ತಾ ಇದ್ದೇನೆ. ಬಡತನದಿಂದ ಅನೇಕಮಂದಿ ಏನು ಸಿಕ್ಕಿದರೆ ಅದನ್ನು ತಿಂದು, ಮಾಂಸಾಹಾರಿಗಳಾಗಿಯೇ ಇರಬೇಕಾಗುತ್ತದೆ. ಧನಿಕರಾಗಿರುವವರಿಗೆ ಲಭಿಸುವಂತಹ ಒಳ್ಳೆಯ ಬಲವರ್ಧಕವಾದ ಶಾಕಾಹಾರಗಳು ಬಡಜನತೆಗೆ ಎಟುಕುವಂತಿರಲಾರವಷ್ಟೆ? ಮಾನವ ಸೇವಾ ಧರ್ಮವನ್ನೇ ನಿರ್ವಹಿಸಿಕೊಂಡಿರುವುದೇ ಕರ್ತವ್ಯವಾಗಿರುವ ಬೌದ್ಧ ಭಿಕ್ಷುಗಳು ತಮ್ಮ ಪ್ರಾಣರಕ್ಷಣೆಗೆ ಮಾತ್ರವೇ ಆಹಾರ ತೆಗೆದುಕೊಳ್ಳಬೇಕಾಗುತ್ತದೆ. ಅವರು ಆಹಾರವನ್ನು ಭಿಕ್ಷೆ ಬೇಡುತ್ತಾರೆ. ಅವರಿಗೆ ಎಲ್ಲಾ ಬಗೆಯ ಜನರೂ ಭಿಕ್ಷೆ ನೀಡುತ್ತಾರೆ. ಅವರಿಗೆ ಕವಳ ಹಾಕುವವರು ಮಾಂಸಾಹಾರಿಗಳಾಗಿರಬಾರದೆಂದೂ, ಶಾಕಾಹಾರಿಗಳು ಮಾತ್ರವೇ ಆಗಿರಬೇಕೆಂದೂ ಶಾಸನ ಮಾಡುವ ಅಧಿಕಾರವು ನನಗಿಲ್ಲ. ಮಾಂಸಾಹಾರಿಗಳೆಂದೂ, ಶಾಕಾಹಾರಿಗಳೆಂದೂ ಭೇದಭಾವವಿಟ್ಟುಕೊಂಡು ಭಿಕ್ಷೆಗೆ ಹೋಗುವುದೆಂದರೆ, ಕುಲ ಮತ ಭೇದಗಳಿಗೆ ಅತೀತವಾದ ಸರ್ವ ಸಮಾನತೆಯನ್ನು ಕೋರುವ ಬೌದ್ಧ ಧರ್ಮಕ್ಕೆ ವಿರುದ್ಧವಾದುದು. ಬೌದ್ಧ ಭಿಕ್ಷುಗಳು ಭೇದಭಾವನೆಗೆ ಎಡೆಕೊಡದಂತೆ ಪ್ರವರ್ತಿಸಬೇಕೆಂತಲೇ ನಾನು ಹೇಳುತ್ತೇನೆ. ಭಿಕ್ಷೆಗೆ ಹೋಗುವವರು ಯಾರೇನು ಕೊಟ್ಟರೂ ಸ್ವೀಕರಿಸಲೇಬೇಕು. ಎಲ್ಲರೂ ಅಹಿಂಸಾಧರ್ಮವನ್ನು ಹಿಡಿಯುತ್ತಾ ಬಂದಹಾಗೆ ಮಾಂಸಾಹಾರವು ತನ್ನಂತೆ ಕಡಮೆಯಾಗುತ್ತಾ ಬಂದು ನಿನ್ನ ಪ್ರಶ್ನೆಗೆ ಅವಕಾಶವೇ ಇಲ್ಲದಂತಾಗುತ್ತದೆಂದು ತಿಳಿಯಪ್ಪ" ಎಂದನು.

"ನೀನು ಹೇಳುವ ಇಷ್ಟುದ್ದವಾದ ಮಾತಿನ ಅರ್ಥ ಭಿಕ್ಷೆಗೆ ಹೋಗುವವನು ಯಾರು ಏನು ಕೊಟ್ಟರೂ ತೆಗೆದುಕೊಳ್ಳಬೇಕು ಎಂದೇ ತಾನೇ?" ಎಂದು ಕೇಳಿದನು ದೇವದತ್ತ.

ಬುದ್ಧನು ಮುಗುಳ್ನಗುವನ್ನು ಬಿಂಬಿಸಿ, "ಯಾರು ಎಂತಹ ಆಹಾರದಿಂದ ತಮ್ಮ ಜೀವನವನ್ನು ನಡೆಸುವವರೋ ಅದನ್ನೇ ಕವಳವಾಗಿ ಹಾಕಿದರೆ ಕುಲ ವರ್ಗ ಭೇದವಿಲ್ಲದ ಭಿಕ್ಷು ಅದನ್ನೇ




ಸ್ವೀಕರಿಸಿ ತಿನ್ನುವುದು ಭಿಕ್ಷುಕ ಧರ್ಮವೇ ಹೌದು. ಸಂದೇಹವೇ ಬೇಡ!" ಎಂದನು.

ಈ ಮಾತನ್ನು ಕೇಳಿ ದೇವದತ್ತನು ತಲೆಯಾಡಿಸಿಕೊಂಡು ಹೊರಟುಹೋದನು.

"ಇನ್ನು ಈ ಬುದ್ಧನನ್ನು ಉಳಿಯಗೊಡಬಾರದು. ಇವನ ಅಂತ್ಯವಾಗಲೇ ಬೇಕು. ಇಲ್ಲದಿದ್ದರೆ ವೃದ್ಧಾಪ್ಯವನ್ನೂ, ಆರೋಗ್ಯವನ್ನೂ ಲೆಕ್ಕಿಸದೆ ಇನ್ನೂ ತನ್ನ ಬೋಧನೆ ಸಾಗಿಸಿಕೊಂಡೇ ಇರುತ್ತಾನೆ. ಹೀನಜಾತಿಯಲ್ಲಿರುವವರೆಲ್ಲರನ್ನೂ ಜ್ಞಾನ ಸಂಪನ್ನರಾಗುವಂತೆ ಮಾಡುತ್ತ ಬೌದ್ಧರಾಗಿ ಸೇರಿಸಿಕೊಳ್ಳುತ್ತಲೇ ಇರುತ್ತಾನೆ. ತಗ್ಗಿ ಬಾಗಿ ಅಡಗಿಕೊಂಡಿರಬೇಕಾದ ದಳಿತವರ್ಗದವರಿಗೆ ತಿಳುವಳಿಕೆ ಹೆಚ್ಚಾಗಿ ಬಂದುಬಿಟ್ಟರೆ ಅಗ್ರವರ್ಣೀಯರನ್ನು ಕೇಳುವವರಿಲ್ಲದಂತಾಗುತ್ತದೆ. ಚಾಕರಿ ಮಾಡುವವರೇ ಇಲ್ಲದಾಗುವರು. ಎಲ್ಲರೂ ಗರ್ವಿಷ್ಠರಾಗುವರು. ಹಾಗಾಗದಿರಬೇಕಾದರೆ ಬುದ್ಧನನ್ನು ಅಂತ್ಯಗೊಳಿಸಬೇಕು" ಎಂದುಕೊಳ್ಳುತ್ತಾ, ದೇವದತ್ತನು, ಜೀವಕನ ಬಳಿಗೆ ಹೋದನು.

ಜೀವಕನು ಹೀನಕುಲಕ್ಕೆ ಸೇರಿದ ಬುದ್ಧನ ಶಿಷ್ಯ. ಬೌದ್ಧಧರ್ಮದ ಮೇಲೆ ಅಪಾರ ವಿಶ್ವಾಸವಿಟ್ಟು ಬುದ್ಧನನ್ನು ದೇವರಂತೆ ಭಾವಿಸುತ್ತಿದ್ದನು.

ಅಂಥವನನ್ನು ದೇವದತ್ತನು ತನ್ನ ವಾಕ್ಚಾತುರ್ಯದಿಂದ ಬಗ್ಗಿಸಿ ತನ್ನ ಸಹಾಯಕ್ಕೆ ತಿರುಗಿಸಿಕೊಂಡನು.

"ಸ್ವಲ್ಪ ಆಳವಾಗಿ ಆಲೋಚಿಸಿ ನೋಡಿದರೆ ಬುದ್ಧನು ಹೇಳುವುದೆಲ್ಲವೂ ಶುದ್ಧವಾಗಿ ಸುಳ್ಳು-ಕೆಲಸಕ್ಕೆ ಬಾರದ ಮಾತುಗಳು. ನಿಮ್ಮ ವರ್ಗವನ್ನು ತನ್ನ ಬಲೆಯಲ್ಲಿ ಹಾಕಿಕೊಳ್ಳಲು ಎಲ್ಲರೂ ಸಮಾನರೇ ಎಂದು ಪಲ್ಲವಿಸಿಕೊಂಡೇ ಇರುತ್ತಾನೆ. ಪ್ರಪಂಚವು ಸಮಾನವಾಗಿಲ್ಲವೇ ಇಲ್ಲ. ಎತ್ತರ ತಗ್ಗುಗಳಿಂದಲೇ ಕೂಡಿದೆ. ಬುದ್ಧನಿಗಾದರೂ ನಿಮ್ಮಗಳ ಹಾಗೇ ಬದುಕಿರಲು ಸಾಧ್ಯವೆ? ನೀವು ತಿನ್ನುವುದನ್ನೆಲ್ಲ ಅವನು ತಿನ್ನುತ್ತಾನೆಯೆ?" ಎಂದು ಮುಂತಾಗಿ ಹೇಳಿ ಜೀವಕನ ಮನಸ್ಸಿನಲ್ಲಿ ವಿಷಬೀಜ ಬಿತ್ತಿದನು ದೇವದತ್ತ. ಬೇಕಾದರೆ ಬುದ್ಧನನ್ನು ಭಿಕ್ಷೆಗೆ ಆಹ್ವಾನಿಸಿ ನೋಡೆಂತಲೂ ಹೇಳಿದನು.

ಜೀವಕನು ಬುದ್ಧನ ಬಳಿಗೆ ಹೋಗಿ ತನ್ನ ಮನೆಗೆ ಭಿಕ್ಷೆಗೆ ಬಂದು ತಾನು ಮಾಡುವ ಆತಿಥ್ಯವನ್ನು ಸ್ವೀಕರಿಸಬೇಕೆಂದು ಕೇಳಿಕೊಂಡನು. ಕೂಡಲೇ ಬುದ್ಧನು ಜೀವಕನ ಹಿಂದೆಯೇ ಹೊರಟನು. ಇದನ್ನೆಲ್ಲಾ ದೇವದತ್ತನು ರಹಸ್ಯವಾಗಿ ನೋಡಿಕೊಂಡೇ ಇದ್ದನು.

ಜೀವಕನು ಹೀಗಾಗುವುದೆಂದು, ತಾನು ಕರೆದ ಕೂಡಲೇ ಬುದ್ಧನು ಹೊರಟು ಬರುವನೆಂದು ಅಂದುಕೊಂಡಿರಲಿಲ್ಲ. ಅಂತಲೇ ಅವನು ಮನೆಗೆ ಬಂದ ಬುದ್ಧನಿಗೆ ಏನು ಕವಳ ನೀಡುವುದೆಂದು ಹೊಯ್ದಾಡಿಕೊಂಡಿರುವಾಗ ಬುದ್ಧನು, "ಅಪ್ಪಾ, ಜೀವಕಾ! ಪ್ರತ್ಯಕ್ಷವಾಗಿ ನನಗಾಗಿ ಏನೂ ತಯಾರಿ



ಸಿಲ್ಲವೆಂದು ಸಂದೇಹಪಡಬೇಡ. ವಿಶೇಷವಾದುದೇನೂ ನನಗೆ ಬೇಡಪ್ಪ. ನೀನು ತಿನ್ನುವಂತಹುದನ್ನೇ ನನಗಿಷ್ಟು ಕೊಟ್ಟುಬಿಡು. ನಿನ್ನ ಭಿಕ್ಷೆಯನ್ನೇ ನಂಬಿಕೊಂಡು ಬಂದಿದ್ದೇನೆ" ಎಂದನು.

ಜೀವಕನು ಬುದ್ಧನಿಗೆ ನಡುಗುವ ಕೈಗಳಿಂದ ಕವಳವನ್ನು ನೀಡಿದನು. ಬುದ್ಧನು ಅದನ್ನು ತೃಪ್ತಿಯಾಗಿ ತಿಂದನು.

ಆಗಲೇ ಬುದ್ಧನ ಆರೋಗ್ಯವು ಸರಿಯಾಗಿರಲಿಲ್ಲ. ವೃದ್ಧಾಪ್ಯದಿಂದಾಗಿ ಜೀರ್ಣಶಕ್ತಿ ತಗ್ಗಿಹೋಗಿದ್ದಿತು. ಜೀವಕನು ನೀಡಿದ ಭಿಕ್ಷೆ ಮಾಂಸದಿಂದ ತಯಾರಾದುದು. ಅದು ಕೂಡಾ ಅಷ್ಟು ಒಳ್ಳೆಯ ಮಾಂಸವಾಗಿರಲಿಲ್ಲ.

ಆದರೆ ಬುದ್ಧನು ಸಂತೃಪ್ತಿಯಿಂದ ಜೀವಕನನ್ನು ಆಶೀರ್ವದಿಸಿ ಹೊರಟುಹೋದನು. ಜೀವಕನಲ್ಲಿ ಪಾಪಭೀತಿ ತಲೆ ಎತ್ತಿತು. ಅವನ ಮುಖವು ದೊಡ್ಡ ಅಪರಾಧಿಯಂತೆ ಮುದುಡತೊಡಗಿತು. ರಹಸ್ಯದಲ್ಲಿದ್ದು ನೋಡುತ್ತಿದ್ದ ದೇವದತ್ತನು, ಬುದ್ಧನ ಸತ್ಯಸಂಧತೆಗೆ ಬೆರಗಾಗುತ್ತ, ತಾನು ತಲೆಹಾಕಿದ ದ್ರೋಹವನ್ನು ನೆನೆದು ವೇದನೆಗೊಳಗಾಗ ತೊಡಗಿದನು.

ಶರೀರಧರ್ಮಕ್ಕೆ ಸರಿಹೊಂದದ ಆಹಾರ ಸೇವನೆಯಿಂದ ಬುದ್ಧನು ಅಸ್ವಸ್ಥನಾದನು. ರೋಗಗ್ರಸ್ತನಾಗಿ ದಿನದಿಂದ ದಿನಕ್ಕೆ ಕ್ಷೀಣಿಸುತ್ತಾ ಅವಸಾನ ದಶೆಗೆ ಬಂದನು ಬುದ್ಧ.

ಬುದ್ಧನು ಮಲಗಿಕೊಂಡಿರುವ ವೇದಿಕೆಯ ಸುತ್ತಲೂ, ಪ್ರಧಾನ ಶಿಷ್ಯರು ತಲೆಬಾಗಿಕೊಂಡು ಮೌನವಾಗಿ ನಿಂತಿದ್ದರು. ಎಲ್ಲರೂ ವಿಚಾರದಲ್ಲಿ ಮುಳುಗಿದರು. ವಾತಾವರಣವು ಸ್ತಂಭಿಸಿಹೋದಂತೆ ನಿಃಶಬ್ದವಾಗಿತ್ತು. ಆಗ ಅಲ್ಲಿಗೆ ಅಪರಾಧಿಗಳಂತೆ ಜೀವಕನೂ, ದೇವದತ್ತನೂ ಪಶ್ಚಾತ್ತಾಪದಿಂದ ಕುದಿಯುತ್ತಾ ಬಂದು ಬುದ್ಧನ ಪಾದಗಳ ಹತ್ತಿರ ನಮಸ್ಕಾರ ಮಾಡುತ್ತ ಬಾಗಿ ಬೇಡಿಕೊಳ್ಳುವ ಹಾಗೆ ಸುಮ್ಮನೆ ಪಿಳಿಪಿಳಿಸಿ ನೋಡುತ್ತಿದ್ದರು.

ಬುದ್ಧನು ಅವರ ಬರುವಿಕೆಯನ್ನು ತಿಳಿದು, ಕಣ್ಣುಗಳನ್ನು ತೆರೆದು ಪ್ರೀತಿಯಾಗಿ ಅವರನ್ನು ನೋಡಿ, ಇಬ್ಬರನ್ನೂ ಸಮೀಪ ಬರುವಂತೆ ಕರೆದು, "ನೀವು ಚಿಂತಿಸಬೇಕಾದ ಅಗತ್ಯವೇ ಇಲ್ಲ. ಮನುಷ್ಯನಾದವನಿಗೆ ಯಾವುದೋ ಒಂದು ವಿಧವಾಗಿ ಮರಣವು ತಪ್ಪುವಂಥಾದ್ದಲ್ಲವಷ್ಟೆ? ನಾನು ನಿರ್ವಾಣವನ್ನು ಸೇರಿಕೊಳ್ಳಲು ನೀವು ಸಹಾಯಕರಾದಿರಿ. ನಿಮಗೆ ತುಂಬಾ ಕೃತಜ್ಞತೆಗಳು. ನಿರ್ವಾಣವೆಂಬುದು ಚರ್ಮ ಚಕ್ಷುಸ್ಸಿಗೆ ಕಾಣದಂತಹ ಬೆಳಕಾಗಿದೆ. ಜ್ಯೋತಿ ಆರಿಹೋಗುವಾಗ, ಬೆಳಕು ಎಲ್ಲಿಗೆ ಹೋಗುವುದೋ ಆ ನಿರ್ವಾಣ ಪಥಕ್ಕೆ ಹೊರಟಿದ್ದೇನೆ. ಇದರಲ್ಲಿ ನಿನ್ನದೇನೂ ತಪ್ಪಿಲ್ಲವಪ್ಪಾ, ಜೀವಕಾ" ಎಂದನು.

ದೇವದತ್ತನಲ್ಲಿ ದೊಡ್ಡ ಪರಿವರ್ತನೆ ಉಂಟಾಗಿಬಿಟ್ಟಿತು. ಬುದ್ಧನ ಪಾದಗಳನ್ನು ಮುಟ್ಟಲು



ಅನುಜ್ಞೆ ಕೇಳಿದನು. ಬುದ್ಧನು ಅವನ ಭುಜಗಳ ಮೇಲೆ ತನ್ನ ಕೈಯನ್ನು ಬಳಸಿ, "ಅಪ್ಪಾ, ದೇವದತ್ತಾ ! ಬುದ್ಧಿಯನ್ನು ಮಾನವ ಶ್ರೇಯಸ್ಸಿಗೆ ವಿನಿಯೋಗಿಸಿ, ಶ್ರಮಿಸಿದವನೇ ಬುದ್ಧನು. ಆ ಬುದ್ಧನಿಗೆ ಸಾವೇ ಇಲ್ಲ. ಮಾನವರಿಗಾಗಿ ಅವತರಿಸುವ ಮಹಾತ್ಮರೆಲ್ಲರೂ ಬುದ್ಧರೇ. ಜ್ಞಾತಿ ವೈರತ್ವದಿಂದ ವೈಯಕ್ತಿಕವಾಗಿ ನೀನು ನನ್ನನ್ನು ದ್ವೇಷಿಸಿದೆಯೇ ಹೊರತು, ಧರ್ಮವನ್ನು ದ್ವೇಷಿಸಲು ನಿನ್ನಿಂದಾಗದು. ನಿನ್ನ ಆ ವೈಯಕ್ತಿಕ ದೋಷವನ್ನು ನನ್ನೊಂದಿಗೇ ಒಯ್ಯುತ್ತೇನೆ. ಆದುದರಿಂದ ಮುಂದೆ ನೀನೇ ನನ್ನ ಸ್ಥಾನದಲ್ಲಿದ್ದೇನೆಂದು ತಿಳಿದುಕೋ. ನಮ್ಮ ಸೋದರರಾದ ಆನಂದ, ನಂದ ಮೊದಲಾದವರೆಲ್ಲಾ ರಾಜಭೋಗಗಳನ್ನು ಬಿಟ್ಟು, ಬೌದ್ಧಭಿಕ್ಷುಗಳಾಗಿ ಮಾನವ ಸೇವೆಗೆ ಅಂಕಿತರಾಗಿದ್ದಾರೆ. ನನ್ನನ್ನೇ ಅನುಸರಿಸಿ ನೀನೂ ಹಾಗೆಯೇ ಬೌದ್ಧಧರ್ಮವನ್ನು ಅನುವರ್ತಿಸಿ ವ್ಯಾಪ್ತಿಯಾಗುವಂತೆ ಮಾಡು. ಬೌದ್ಧ ಸಂಘಾರಾಮಗಳನ್ನು, ಬೌದ್ಧಭಿಕ್ಷುಗಳನ್ನು ಸರಿ ದಾರಿಯಲ್ಲಿ ನಡೆಯುವಂತೆ ಮಾಡು. ಅದಕ್ಕೆಲ್ಲಾ ನೀನು ಸಮರ್ಥನಾಗಿರುವಿ." ಎಂದು ದೇವದತ್ತನ ತಲೆಯ ಮೇಲೆ ಕೈಯಿಟ್ಟು ಆಶೀರ್ವದಿಸಿದನು.

ದೇವದತ್ತನು ಪುಲಕಾಂಗಿತನಾಗಿ ಮೈಮರೆತು ಕಣ್ಣುಗಳನ್ನು ಮುಚ್ಚಿ, "ಬುದ್ಧಂ ಶರಣಂ ಗಚ್ಛಾಮಿ, ಧರ್ಮಂ ಶರಣಂ ಗಚ್ಛಾಮಿ, ಸಂಘಂ ಶರಣಂ ಗಚ್ಛಾಮಿ" ಎಂದು ಮೂರುಸಾರಿ ಜಪಿಸಿ, "ಹೇ ಬುದ್ಧಭಗವಾನ್ ! ಮಾನವನೇ ದೇವನಾಗಿ ಬದಲಾಯಿಸುವ ದಾರಿಯನ್ನು ತೋರಿಸಿ, ಬೇರೆ ದೇವರುಗಳನ್ನು ಕುರಿತು ಆಲೋಚಿಸಲು ಎಡೆ ಇಲ್ಲದಂತಹ ಉನ್ನತ ಧರ್ಮವನ್ನು ಬೋಧಿಸಿದ ನೀನೇ ನಿಜವಾಗಿಯೂ ಭಗವಂತನು" ಎಂದು ಹೇಳಿ ಕೈ ಎತ್ತಿ ನಮಸ್ಕಾರ ಮಾಡಿದನು.

ಅದಿನ ಕೂಡಾ ವೈಶಾಖ ಪೂರ್ಣಿಮೆಯೇ. ತುಂಬಿದ ಬಟ್ಟಿ ಚಂದ್ರನು ಮೂಡು ದಿಕ್ಕಿನಲ್ಲಿ ಪ್ರಕಾಶಿಸುತ್ತಿದ್ದನು. ಪ್ರಪಂಚದ ಮೂಡು ದಿಕ್ಕಿನಲ್ಲಿ ಉದಯಿಸಿದ ಪ್ರಾಗ್ಜ್ಯೋತಿಯಾಗಿ ಕೀರ್ತಿಸಲ್ಪಟ್ಟ ಬುದ್ಧಭಗವಾನನು ನಿರ್ವಾಣ ಹೊಂದಿದನು. ಪೂರ್ಣ ಚಂದ್ರಬಿಂಬವು ಇನ್ನಷ್ಟು ತೇಜೋವಂತವಾಗಿ ಆಕಾಶಮಧ್ಯದಲ್ಲಿ ಬೆಳದಿಂಗಳು ಚೆಲ್ಲಿಕೊಂಡಿದ್ದಿತು.

ಬುದ್ಧನ ಅನಂತರ, ಬುದ್ಧನು ಪ್ರಬೋಧಿಸಿದ ಧರ್ಮಗಳೂ, ಸೂತ್ರಗಳೂ ಬೌದ್ಧಮತವೆನಿಸಿ, ಬುದ್ಧನು ದೇವನಾಗಿ ಆರಾಧಿಸಲ್ಪಟ್ಟನು. ಅವತಾರ ಮೂರ್ತಿಯಾಗಿಯೂ ಗುರುತಿಸಲ್ಪಟ್ಟನು.

ಸೂತಪುರಾಣಿಕನು ಬುದ್ಧಾವತಾರದ ವೃತ್ತಾಂತವನ್ನು ಮುಗಿಸಿ, ಕೊನೆಯದಾದ ಹತ್ತನೆಯ ಕಲ್ಕ್ಯಾವತಾರದ ವೃತ್ತಾಂತವನ್ನು ಹೇಳಲು ಪ್ರಾರಂಭಿಸಿದನು.

ಕೃತ, ತ್ರೇತ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳೂ ಕೂಡಿ ಒಂದು ಮಹಾ ಯುಗವಾಗುತ್ತದೆ.

ಪ್ರತಿ ಮಹಾಯುಗದ ಅಂತ್ಯದಲ್ಲಿಯೂ ಕಲಿಯುಗದ ಕೊನೆಯ ದಶೆಯಲ್ಲಿ ಕಲಿಯ ಪ್ರಭಾವವು ತಾರಸ್ಥಾಯಿಯನ್ನು ಮುಟ್ಟಿದಾಗ ಲೋಕವು ದೊಡ್ಡ ಸಂಕ್ಷೋಭಕ್ಕೊಳಗಾಗುತ್ತದೆ.

"ದೇವನೆಂಬವನಿದ್ದಾನೇನು ?" ಎಂಬ ಪ್ರಶ್ನೆ ಒಂದು ಕಡೆಯಲ್ಲಿದ್ದರೆ, ಮತ್ತೊಂದು ಕಡೆಯಲ್ಲಿ "ಮನುಷ್ಯರೆಂಬವರಿದ್ದಾರೆಯೆ ?" ಎಂದು ಅನಿಸುವಂತಹ ಕಾಲವೇ ಅದು. ಆಗ ಮನುಷ್ಯರೆಲ್ಲ ವಿಪರೀತ ಬುದ್ಧಿಯುವರಾಗುತ್ತಾರೆ.

ಏಕಪಕ್ಷದಿಂದ ಭಿನ್ನತ್ವದಲ್ಲಿ ಮಾನವ ಸಮಾಜವು ಛಿನ್ನಾಭಿನ್ನವಾಗಿ ವರ್ಗಗಳು, ತರಭೇದಗಳು, ಅವುಗಳಿಂದ ಹುಟ್ಟುವ ಕಲಹಗಳು, ಜಾತಿಗಳು, ಜಾತಿ ವೈಷಮ್ಯಗಳು, ದೌರ್ಜನ್ಯತೆ, ದುರಧಿಕಾರ, ಹಿಂಸೆ ಮುಂತಾದ ವಿನಾಶಕಾರಿಗಳು ಹೆಚ್ಚಾಗಿ, ಒಳ್ಳೆಯುವರಿಗೆ ನಿಲ್ಲಲು ನೆರಳಿಲ್ಲದೆ ಹೋಗುತ್ತದೆ.

ಪಾಲಕರನ್ನು ಹೋಲಿಸುವಾಗ ರಾಕ್ಷಸರು ಎಷ್ಟೋ ಒಳ್ಳೆಯುವರೆನ್ನಿಸುವರು. ಎಲ್ಲಾ ವಿಧದಲ್ಲಿಯೂ ಒಬ್ಬರನ್ನೊಬ್ಬರು ದೋಚಿಕೊಳ್ಳುವುದೇ ಜೀವನದ ಪರಮಾರ್ಥವೆಂದುಕೊಂಡು, ಮನುಷ್ಯರು ಕ್ರೂರ ಮೃಗಗಳನ್ನು ಮೀರಿಸಿಬಿಡುತ್ತಾರೆ. ಮತಗಳಿಂದ ದುರಹಂಕಾರಿಗಳಾಗಿ ಪಿಶಾಚಿಗಳಾಗುತ್ತಾರೆ.

ಮೇಧಾವಿಗಳ ಮೇಧಸ್ಸು ವಿಧ್ವಂಸನ ಕಾರ್ಯಗಳಿಗೆ ಸಹಾಯ ಮಾಡುವಂತಿರುತ್ತದೆ. ಕೋಟಾನುಕೋಟಿ ಪ್ರಜೆಗಳು ಒಂದೇಸಾರಿ ನಿರ್ನಾಮವಾಗುವಂತಹ ಸಾಧನಗಳು ಬಂದುಬಿಡುತ್ತವೆ. ಅವುಗಳಿಂದ ಗ್ರಹಗಳ ತಿರುಗಾಟ ಅಕ್ರಮವಕ್ರವಾಗುತ್ತದೆ. ಪ್ರಕೃತಿ ಧರ್ಮಗಳೆಲ್ಲವೂ ಅಸ್ತವ್ಯಸ್ತವಾಗುತ್ತವೆ. ಭೂಮಾತೆ ಗೋಳಾಡಿಕೊಂಡಿರುತ್ತಾಳೆ.

ಅಂತಹ ಸಂಕಟ ಪರಿಸ್ಥಿತಿಯಲ್ಲಿ ದಂಡನೀತಿಯ ಹೊರತು ಬೇರೆ ಮಾರ್ಗವಿಲ್ಲವೆಂದು ನಿರ್ಣಯಿಸುತ್ತಾನೆ ವಿಷ್ಣು. ದುರ್ಮಾರ್ಗಿಗಳನ್ನು ಕಡಿದುಹಾಕಿ



ಸನ್ಮಾರ್ಗಿಗಳಿಗೆ ವಸತಿಯನ್ನುಂಟುಮಾಡಲು ವಿಷ್ಣು ಕಲ್ಕಿಮೂರ್ತಿಯಾಗಿ ಅವತರಿಸುತ್ತಾನೆ. ಇದೇ ವಿಷ್ಣುವಿನ ಹತ್ತನೆಯದಾದ ಕಲ್ಕ್ಯಾವತಾರ.

ಶಿವನು ತನ್ನ ಅಂಶದಿಂದ ದೊಡ್ಡದೊಂದು ಕುದುರೆಯನ್ನು ಸೃಷ್ಟಿಸಿ ಕಲ್ಕಿ ಮೂರ್ತಿಗೆ ಕೊಡುತ್ತಾನೆ. ಆ ಮಹಾಶ್ವವು ಕಾಲಗಮನವನ್ನು ಮೀರಿಸುವಂತಹ ವೇಗದಿಂದ, ಬಿಳೀ ಹೊಗೆಯನ್ನು ಮೂಗಿನಿಂದ ಉಗುಳುತ್ತಾ ಧೂಮಕೇತುವಿನ ಹಾಗೆ ಆಕಾಶಗಮನ ಮಾಡುವಂತಹುದಾಗಿ ಗ್ರಹಾಂತರಗಳಿಗೆ ಕೂಡಾ ಹೋಗುತ್ತದೆ.

ಆ ಕುದುರೆಯ ಮೇಲೆ ಕಲ್ಕಿಮೂರ್ತಿ ಅಧಿರೋಹಿಸಿ, ಆಕಾಶವನ್ನು ಚುಚ್ಚುವಷ್ಟು ದೊಡ್ಡದಾದ ಖಡ್ಗವನ್ನು ಧರಿಸಿ ದುಷ್ಟಶಕ್ತಿಗಳನ್ನು ಹತಮಾಡಲು ಹೊರಡುತ್ತಾನೆ. ಪ್ರಳಯ ಮೇಘಗಳ ವಿದ್ಯುತ್ತಿನಿಂದ ತಯಾರಿಸಲ್ಪಟ್ಟ ಆ ಖಡ್ಗ ಮಿಂಚಿನ ಹಾಗೆ ಆಕಾಶದಿಂದ ನೆಲಕ್ಕೆ ಜಾರುತ್ತ ದುಷ್ಟಖಂಡನ ಮಾಡುತ್ತದೆ.

ಕಲ್ಕ್ಯವತಾರ ಮೂರ್ತಿ ಮಹಾ ಯೋಧನ ಹಾಗೆ ಧಗಧಗಿಸುವ ಕವಚವನ್ನು ಆಪಾದಮಸ್ತಕ ಪರ್ಯಂತ ಧರಿಸಿ, ಒಳ್ಳೆಯವರಿಗೆ ದಿವ್ಯ ಸುಂದರ ಮೂರ್ತಿಯಾಗಿ, ದುರ್ಜನರಿಗೆ ಮಹಾ ಭಯಂಕರ ಮೂರ್ತಿಯಾಗಿ ಕಾಣುತ್ತಾನೆ.

ವಿಷ್ಣುವಿನ ಈ ಕಲ್ಕ್ಯವತಾರವು ದೇಶ ಭೇದಗಳಿಗೆ ತಕ್ಕ ಹಾಗೆ, ಅನೇಕ ದೇಶಗಳಲ್ಲಿ ಅನೇಕ ವಿಧಗಳಾದ ರೂಪ ಭೇದಗಳಿಂದ ತೀವ್ರಗತಿಯಲ್ಲಿ ಕುದುರೇ ಸವಾರಿ ಸಾಗಿಸುತ್ತ, ಅವತಾರವೆತ್ತಿದ ಕಾರ್ಯವನ್ನು ನಿರ್ವಹಿಸುತ್ತಾನೆ.

ಕಲ್ಕಿಮೂರ್ತಿಯ ರಭಸಕ್ಕೆ ಕಲಿಪುರುಷನು ತನ್ನ ಪ್ರತಾಪವನ್ನು ತೋರಿಸಲಾಗದೆ ಓಡಿಹೋಗುತ್ತಿರಲು ತನ್ನ ದೀರ್ಘವಾದ ನಿಶಿತ ಕರವಾಲದಿಂದ ಓಡಿಸುತ್ತಾ ಲೋಕದೊಳಗಿನ ದುರ್ಮಾರ್ಗಿಗಳನ್ನೂ ಘಾತುಕ ಗುಂಪಿನವರನ್ನೂ, ಲೋಕ ಸಂಕ್ಷೋಭೆಗೆ ಕಾರಣರಾದ ಪಾಲಕರನ್ನೂ, ದುಷ್ಟವರ್ಗದವರನ್ನೂ ನಿರ್ಮೂಲಿಸುತ್ತಾ ಸಜ್ಜನರಿಗೆ ರಕ್ಷಣೆಯನ್ನುಂಟುಮಾಡುವನು.

ಕಲ್ಕಿಯ ಅವತರಣದಿಂದ ಹೊಸ ಮಹಾ ಯುಗಕ್ಕೆ ನಾಂದಿಯಾಗುತ್ತದೆ. ಗ್ರಹಗತಿಗಳು ಸಕ್ರಮ ಮಾರ್ಗದಲ್ಲಿ ತಿರುಗಲಾರಂಭಿಸುತ್ತವೆ.

ಭೂದೇವಿ ಕಲ್ಕಿ ಅವತಾರಮೂರ್ತಿಗೆ ಪೂಜಿಸಿ, ಆರತಿ ಬೆಳಗಿ ಅನೇಕ ವಿಧಗಳಿಂದ ಸ್ತುತಿಸುತ್ತಿರಲು, ಬ್ರಹ್ಮಾದಿ ದೇವತೆಗಳೂ, ಸಪ್ತರ್ಷಿಗಳೂ, ಪುಷ್ಪ ವೃಷ್ಟಿ ಮಾಡಿ ಕೀರ್ತಿಸುತ್ತಾರೆ. ನಾರದನು ಮಹತೀ ವೀಣೆಯ ಮೇಲೆ ಸಾಮಗಾನವನ್ನು ನಿನದಿಸುತ್ತಾನೆ.

ಭೂಮಿಯ ಮೇಲಿನ ನಿರಂಕುಶ ರಾಜ್ಯ ಪಾಲಕರೂ, ದೌರ್ಜನ್ಯವೂ, ಅಧರ್ಮವೂ ನಶಿಸಿ ಶಾಂತಿಯನ್ನು ನೆಲೆಗೊಳಿಸುವ ಕಲ್ಕಿಮೂರ್ತಿ ಮಾನವಕೋಟಿಯನ್ನು ಭಿನ್ನತ್ವದಿಂದ ಏಕತ್ವಕ್ಕೆ, ಶಾಂತಿಯುತವಾದ ಸಹಜೀವನಕ್ಕೆ ತಿರುಗಿಸುತ್ತಾನೆ. ಆಗ ಕೃತಯುಗವು ಚಿಗುರತೊಡಗಿ ಮತ್ತೊಂದು ಮಹಾಯುಗವು ಪ್ರಾರಂಭವಾಗುತ್ತದೆ. ವಿಷ್ಣು ತನ್ನ ಕಲ್ಕಿ ರೂಪವನ್ನು ಉಪಸಂಹಾರಮಾಡಿಕೊಂಡು, ಸರ್ವತ್ರ ವ್ಯಾಪಿಸಿ, ವಿಶ್ವಸ್ಥಿತಿಗೆ ಮೂಲವಾಗಿ ನಿಲ್ಲುತ್ತಾನೆ.

ವಿಷ್ಣು ಅಂದರೆ ವ್ಯಾಪಿಸುವವನು ಎಂದು ಅರ್ಥ. ಸರ್ವ ವ್ಯಾಪಕನಾದ ವಿಷ್ಣು ಪರಿಣಾಮ ಸ್ವರೂಪನಾಗಿ ಹರಡುತ್ತಾನೆ. ಈ ಮಹಾ ವಿಶ್ವವೇ ಅವನ ಪರಿಪೂರ್ಣ ಸ್ವರೂಪವಾಗಿದೆ. ಕ್ಷೀರಸಾಗರದಂತೆ ಕಾಣುವ ನಕ್ಷತ್ರ ನೀಹಾರಿಕೆಗಳೆಲ್ಲವೂ ವಿಷ್ಣುವಿನ ವಿಶ್ವರೂಪದಲ್ಲಿವೆ. ಹೀಗೆ ಹೇಳುತ್ತ ಸೂತಪೌರಾಣಿಕ ಮಹರ್ಷಿ ದಶಾವತಾರಗಳು ಪ್ರಧಾನವಾಗಿರುವ ವಿಷ್ಣುಕಥೆಯನ್ನು ಸಮಗ್ರವಾಗಿ ಸಂಪೂರ್ಣಗೊಳಿಸಿದನು. (ಸಮಾಪ್ತಿ)



# ಕೊನೆಯ ಆಸೆ

ಹೆಂಡತಿ ಮಕ್ಕಳಾರೂ ಇಲ್ಲದ ಜೋಗಯ್ಯನೆಂಬ ಧನಿಕನೊಬ್ಬನು ದೀರ್ಘ ವ್ಯಾಧಿಯಿಂದ ಹಾಸಿಗೆ ಹಿಡಿದನು. ತಿಂಗಳ ಲೆಕ್ಕದಲ್ಲಿ ವೈದ್ಯ ನಡೆಯುತ್ತಿದ್ದರೂ ವ್ಯಾಧಿ ಹೆಚ್ಚೇ ಆಯಿತು.

ಅವನ ಆಸ್ತಿಗೆಲ್ಲಾ ವಾರಸುದಾರನಾಗಲಿರುವ ಶ್ರೀಪತಿ ಮಾತ್ರ ಜೋಗಯ್ಯನ ಮಂಚದ ಹತ್ತಿರವೇ ಕಾವಲು ಕಾಯುವವನಂತೆ ಕುಳಿತಿರುತ್ತಿದ್ದ.

ಜೋಗಯ್ಯನಿಗೆ ವೈದ್ಯ ನಡೆಸುವ ವರದಾಚಾರ್ಯರು ಬಂದು, ರೋಗಿಯನ್ನು ಚೆನ್ನಾಗಿ ಪರೀಕ್ಷಿಸಿ, ಶ್ರೀಪತಿಯನ್ನು ಬದಿಗೆ ಕರೆದು, "ನಿನ್ನ ಮಾವಯ್ಯನ ಪರಿಸ್ಥಿತಿ ಏನೂ ಚೆನ್ನಾಗಿಲ್ಲ. ಅವರು ಸ್ಮೃತಿಯಲ್ಲಿರುವಂತೆಯೂ ಕಾಣುವುದಿಲ್ಲ. ಆದರೂ ಗಮನಿಸಿಕೊಂಡಿರು. ಒಂದು ವೇಳೆ ಅವರಲ್ಲಿ ಏನಾದರೂ ಚಲನೆ ಕಂಡು ಬಂದ ಕೂಡಲೇ, ಈ ಎರಡು ಮಾತ್ರೆಗಳನ್ನೂ ನುಂಗಿಸಿ ಬಿಡು. ಆಯುಷ್ಯದ ತುಂತುಗಟ್ಟಿ ಇದ್ದರೆ ಒಳ್ಳೆಯ ಫಲ ಸಿಕ್ಕಿದರೂ ಸಿಗಬಹುದು" ಎಂದರು.

ವೈದ್ಯರು ಅತ್ತ ಹೋದ ಕೂಡಲೇ ಜೋಗಯ್ಯ ಕಣ್ಣು ತೆರೆದು, ಶ್ರೀಪತಿಯನ್ನು ಹತ್ತಿರ ಕರೆದು, ಆಸ್ತಿ ಪಾಸ್ತಿಗಳನ್ನು ಸಂಪಾದಿಸುವುದು ಎಷ್ಟು ಕಷ್ಟವೋ, ಅವುಗಳನ್ನು ಕಾಪಾಡಿಕೊಳ್ಳುವುದೂ ಅಷ್ಟೇ ಕಷ್ಟವೆಂದು ವಿವರಿಸುತ್ತ, ಹೀನ ಸ್ವರದಿಂದ ಏನೇನೋ ಹೇಳುತ್ತಿದ್ದನು.

ಶ್ರೀಪತಿ ತುಂಬಾ ಚಿಂತೆ ತುಂಬಿದ ಮುಖ ಮಾಡಿಕೊಂಡು, "ಅದೆಲ್ಲಾ ಈಗ ಯಾಕೆ ಮಾವಯ್ಯಾ? ನಿಮಗೇನಾದರೂ ಮುಖ್ಯವಾದ ಆಸೆ ಇದ್ದರೆ ಹೇಳಿರಿ. ಈಗ ನೀವಿರುವ ಸ್ಥಿತಿಯಲ್ಲಿ ನಿಮ್ಮ ತೀರದ ಆಸೆ ಏನಾದರಿದ್ದರೆ ಅದನ್ನು ತೀರಿಸುವುದು ನನ್ನ ಕರ್ತವ್ಯ" ಎಂದನು.

ಜೋಗಯ್ಯ ಕ್ಷಣಕಾಲ ತಡೆದು, "ಈಗ ವರದಾಚಾರ್ಯರು ಎರಡು ಮಾತ್ರೆಗಳನ್ನು ಕೊಟ್ಟು ಹೋಗಿದ್ದಾರಷ್ಟೆ? ಅದನ್ನು ನೀನು ಈ ಪರಿಸ್ಥಿತಿಯಲ್ಲಿ ನನ್ನ ಬಾಯಿಗೆ ಹಾಕಿ ನುಂಗಿಸಿ ನೋಡುವುದಕ್ಕಿಂತ, ಬೇರೆ ಆಸೆ ನನಗೇನಿದ್ದೀತು?" ಎಂದನು.

ಶ್ರೀಪತಿಯ ಬಾಯಿಯಿಂದ ಮಾತೇ ಹೊರಡಲಿಲ್ಲ.





# ಹಣದ ಮೂಟೆ

ಒಂದಾನೊಂದು ಗ್ರಾಮದಲ್ಲಿ ಅಬ್ದುಲ್ ರಸೂಲ್ ಎಂಬ ಹುಡುಗನೊಬ್ಬನಿದ್ದನು. ತಾಯಿ ತಂದೆಯರಿಗೆ ಅವನೊಬ್ಬನೇ ಮಗನಾಗಿದ್ದನು. ತಾಯಿ ತಂದೆಯರು ಅತ್ಯಂತ ಬಡವರಾಗಿದ್ದುದರಿಂದಲೇ ದೇವರು ಒಬ್ಬನೇ ಮಗನನ್ನು ಕೊಟ್ಟಿರಬಹುದು. ತಂದೆ ಯಾವಾಗಲೂ ಕಾಯಕಷ್ಟಮಾಡಿ ಸಿಗುವ ಸ್ವಲ್ಪ ಹಣದಿಂದ ಕುಟುಂಬವನ್ನು ಪೋಷಿಸುತ್ತಿದ್ದನು. ರಸೂಲನಿಗೆ ಹದಿನಾರು ವರ್ಷ ವಯಸ್ಸಾದಾಗ ತಾಯಿ ತೀರಿಹೋದಳು. ಆಮೇಲೆ ಒಂದು ವರ್ಷದೊಳಗೆ ತಂದೆಯೂ ತೀರಿಹೋದನು. ರಸೂಲನಿಗೆ, ತನ್ನವರೆನ್ನಲು ಬೇರೆ ಯಾರೂ ಕಾಣದೆ, ದಿಕ್ಕಿಲ್ಲದಾಯಿತು.

ತಾಯಿ ತಂದೆಯರನ್ನು ಕಳೆದುಕೊಂಡ ರಸೂಲನಿಗೆ ಆ ಗ್ರಾಮದಲ್ಲಿರುವುದೇ ಬೇಡೆನಿಸಿತು. ಅಲ್ಲಿ ಎಷ್ಟೇ ಕಷ್ಟಪಟ್ಟರೂ ಸಾಕೂ ಸಾಲದಷ್ಟೇ ಸಿಗುತ್ತಿತ್ತು. ಅದು ಕೂಡಾ ಆಯಾ ದಿನಕ್ಕೇ ತೀರಿಹೋಗುತ್ತಿತ್ತು. ಅಲ್ಲಿಗೆ ದೂರದಲ್ಲಿರುವ ಒಂದು ಪಟ್ಟಣದಲ್ಲಿಬೇರೆ ಬೇರೆ ಜಾಗಗಳಲ್ಲಿ ಅನೇಕ ಅಂಗಡಿಗಳಿರುತ್ತವೆ. ಕಷ್ಟಪಟ್ಟು ಕೆಲಸ ಮಾಡಿದರೆ ಒಳ್ಳೆಯ ಕೂಲಿ ಸಿಗುವುದೆಂದು ಅವನು ಕೇಳಿದ್ದನು. ಹೇಗಾದರೂ ಸ್ವಲ್ಪ ಒಳ್ಳೆಯ ರೀತಿಯಲ್ಲಿ ಬದುಕಬೇಕೆಂದಿರುವ ರಸೂಲ್ ಕಡೆಗೆ ಸಾಹಸಮಾಡಿ ಪಟ್ಟಣಕ್ಕೆ ಹೋಗಿ ಸೇರಿದನು.

ಪಟ್ಟಣದಲ್ಲಿ ರಸೂಲ್ ಒಬ್ಬ ವರ್ತಕನ ಅಂಗಡಿಯಲ್ಲಿ ಕೆಲಸಕ್ಕೆ ಕುದುರಿದನು. ಆ ವರ್ತಕನಿಗೆ ಪಟ್ಟಣದಲ್ಲಿ ಅನೇಕಡೆಗಳಲ್ಲಿ ಅಂಗಡಿಗಳಿದ್ದುವು. ರಸೂಲನ ಕೆಲಸವೇನಂದರೆ, ಅಗತ್ಯವಾದ ಸರಕುಗಳನ್ನು ಒಂದು ಅಂಗಡಿಯಿಂದ ಇನ್ನೊಂದು ಅಂಗಡಿಗೆ ತಲಪಿಸುವುದು. ಇದು ಬಹಳ ಕಷ್ಟದ ಕೆಲಸವೇ.

ಈ ಕೆಲಸದಲ್ಲಿ ಅವನು ಹತ್ತು ವರ್ಷ ಕಷ್ಟಪಟ್ಟು ಸ್ವಲ್ಪ ಹಣವನ್ನು ಸೇರಿಸಿಟ್ಟನು. ಈ ಕಾಲದಲ್ಲಿ ರಸೂಲ್ ತನ್ನ ತಿಂಡಿ ಬಟ್ಟೆಗಳ ವಿಷಯದಲ್ಲಿ ಕೂಡಾ ಬಹಳ ಮಿತವಾಗಿರುತ್ತ, ರಜೆಯ ದಿನಗಳಲ್ಲಿ ಕೂಡಾ ಏನೋ ವಿನೋದಗಳಿಗೆ ಕೂಡಾ ಹಣ ಖರ್ಚು ಮಾಡದೆ ಬಹಳ ಸಾಧಾರಣ ರೀತಿಯಲ್ಲೇ ಬದುಕಿದನು.

ತಿಂಗಳು ತಿಂಗಳೂ ಅವನು ಯಜಮಾನನು ಕೊಡುವ ಸಂಬಳದಲ್ಲಿ ಉಳಿದ ಹಣವನ್ನು ಒಬ್ಬ ಕಾಜೀಯ ಹತ್ತಿರ ಭದ್ರವಾಗಿಡಲು ಕೊಡುತ್ತಿದ್ದನು, ಹಾಗೆ ಸೇರಿಸಿದ ಹಣವು ಹತ್ತು ವರ್ಷ ಕಾಲದಲ್ಲಿ

ಅರೇಬಿಯಾ ಕಥೆ

ಒಂದು ದೊಡ್ಡ ಮೊತ್ತವಾಯಿತು. ಅದನ್ನು ನೋಡಿ ಅವನಿಗೊಂದು ಹೊಸ ಆಲೋಚನೆ ಬಂದಿತು. ತಾನು ಪಟ್ಟಣವನ್ನು ಬಿಟ್ಟು ಸ್ವಂತ ಊರಿಗೆ ಹೋಗಿ ಏನಾದರೂ ಸಣ್ಣದೊಂದು ವ್ಯಾಪಾರವನ್ನು ಏಕೆ ಪ್ರಾರಂಭಿಸಬಾರದು ? ಎಷ್ಟಾದರೂ ಅದು ತಾನು ಹುಟ್ಟಿದ ಊರು.

ಈ ಆಲೋಚನೆಯನ್ನು ರಸೂಲ್ ಕಾಜೀಯೊಂದಿಗೆ ಹೇಳಿದನು. ಅದು ಒಳ್ಳೆಯ ಆಲೋಚನೆಯೆಂದು ಹೇಳಿ ಕಾಜೀ ಹರಸಿ, ತನ್ನ ಹತ್ತಿರವಿದ್ದ ರಸೂಲನ ಹಣವನ್ನು ಪೂರಾ ಅವನಿಗೆ ಕೊಟ್ಟನು.

ರಸೂಲ್ ಆ ಹಣವನ್ನು ಮೂಟೆ ಕಟ್ಟಿಕೊಂಡು, ಮುಂಜಾನೆಯ ಹೊತ್ತಿನಲ್ಲಿ ತನ್ನ ಊರಿನ ಕಡೆಗೆ ಹೊರಟನು. ಎಲ್ಲಿಯೂ ನಿಲ್ಲದೆ ಒಂದೇ ಸಮನೆ ಮಧ್ಯಾಹ್ನದವರೆಗೂ ನಡೆದನು. ಆಗ ಬಿಸಿಲಿನ ಬೇಗೆ ತೀವ್ರವಾದುದರಿಂದ, ಭಾರವಾದ ಹಣದ ಮೂಟೆಯನ್ನು ಹೊತ್ತುಕೊಂಡು ನಡೆಯುವುದು ಬಹಳ ಕಷ್ಟವೆನಿಸಿತು. ಎಲ್ಲಿಯಾದರೂ ಸ್ವಲ್ಪ ಹೊತ್ತು ಕುಳಿತುಕೊಳ್ಳೋಣವೆಂದರೆ ದಾರಿಯಲ್ಲಿ ಖರ್ಜೂರ ಮರಗಳ ಹೊರತು ಬೇರೆ ಯಾವ ನೆರಳೂ ಕಾಣಲಿಲ್ಲ. ಕಡೆಗೆ ರಸೂಲ್ ಸಾಕೂ ಸಾಲದಷ್ಟಿರುವ ಆ ಮರದ ನೆರಳಿನಲ್ಲಿಯೇ, ನಿಂತು ತನ್ನ ತೊಗಲಿನ ಚೀಲದಲ್ಲಿದ್ದ ನೀರನ್ನಿಷ್ಟು ಕುಡಿದನು.

ಆ ಸಮಯದಲ್ಲಿ; ತಾನು ಹೋಗುವ ದೂರದ ಕಡೆಗೇ ಹೋಗುವಂತಿರುವ ಒಬ್ಬ ಕುದುರೇ ಸವಾರನು ಬರುವುದು ಕಂಡಿತು. ಅವನು ಸಮೀಪ ಬಂದ ಕೂಡಲೇ ರಸೂಲ್ ಅವನನ್ನು ಮಾತಾಡಿಸಿ, "ತಾವು ಎಲ್ಲಿಗೆ ಹೋಗುವಿರಿ ? " ಎಂದು ಕೇಳಿದನು.

ಸವಾರನು ಕುದುರೆಯನ್ನು ನಿಲ್ಲಿಸಿ, "ಅಕೋ, ಅಲ್ಲಿ ಕಾಣುವ ಗ್ರಾಮದ ಮೇಲಿಂದಾಗಿ ಮತ್ತೂ ಅಷ್ಟು ದೂರ ಹೋಗುತ್ತೇನೆ. ಆ ಗ್ರಾಮದಾಚೆಯ ನಗರದಲ್ಲಿಯೇ ನನಗೆ ಕೆಲಸ." ಎಂದನು ಸವಾರ.



ಆ ಮಾತು ಕೇಳಿ ರಸೂಲ್ ಬಹಳ ಸಂತೋಷಪಡುತ್ತ, "ಎಷ್ಟು ಒಳ್ಳೇ ಅದೃಷ್ಟ! ಆ ಗ್ರಾಮದಲ್ಲಿರುವ ಛತ್ರದ ಯಜಮಾನ ನನ್ನ ಮಿತ್ರ. ನಾನು ಹೊತ್ತುಕೊಂಡಿರುವ ಈ ಮೂಟೆಯನ್ನು ಸ್ವಲ್ಪ ನಿಮ್ಮ ಕುದುರೆಯ ಮೇಲೆ ಇಟ್ಟುಕೊಂಡು ಒಯ್ದು ಅವನಿಗೆ ಕೊಟ್ಟು ಬಿಡುವಿರಾ ? ನಾನು ಕತ್ತಲಾಗುವುದರೊಳಗೆ ಅಲ್ಲಿಗೆ ಸೇರಿ ಅತನಿಂದ ಮೂಟೆಯನ್ನು ತೆಗೆದುಕೊಳ್ಳುತ್ತೇನೆ. ಇದನ್ನು ಹೊತ್ತುಕೊಂಡು ಅಷ್ಟು ದೂರ ನಡೆಯುವುದು ಬಹಳಕಷ್ಟವಾಗಿದೆ. ಇಷ್ಟು ಮಾಡಿದರೆ ದೊಡ್ಡ ಉಪಕಾರ, ಮರೆಯಲಾರೆ! " ಎಂದನು.

ರಸೂಲನ ಮಾತು ಕೇಳಿ ಸವಾರನು ನಕ್ಕು, ಈ ನಿನ್ನ ಮೂಟೆ ಹೊತ್ತುಕೊಳ್ಳಲು ನಿನಗೆ ಕಷ್ಟವಾಗಿದ್ದರೆ ನನ್ನ ಕುದುರೆಗೆ ನಿನಗಿಂತಲೂ ಹೆಚ್ಚೇ ಕಷ್ಟವಾಗುತ್ತದೆ. ಹೇಳಲು ಅದಕ್ಕೆ ಬಾಯಿ ಬಾರದು. ಅಷ್ಟೇ ವ್ಯತ್ಯಾಸ. ಅಪಾರ್ಥ ಮಾಡಿಕೊಳ್ಳಬೇಡ

ಮಿತ್ರಾ!" ಎಂದು ಹೇಳಿ, ಕುದುರೆಯನ್ನು ತಟ್ಟಿ ತನ್ನಪಾಡಿಗೆ ಓಡಿಸಿಕೊಂಡು ಹೋಗಿಬಿಟ್ಟನು.

ಅವನು ಸ್ವಲ್ಪ ದೂರ ಹೋದ ಮೇಲೆ ಅವನಿಗೆ ಒಂದು ಆಲೋಚನೆ ಬಂತು. ಆ ಮೂಟೆಯನ್ನು ತೆಗೆದುಕೊಳ್ಳದೆ ಬಿಟ್ಟು ಬಂದದ್ದು ತನ್ನ ಬುದ್ಧಿ ಹೀನತೆ ಅನಿಸಿತು. ಒಂದುವೇಳೆ ಆ ಮೂಟೆಯಲ್ಲಿ ಬೆಲೆ ಬಾಳುವ ವಸ್ತುವೇನಾದರೂ ಇದ್ದರೆ ಆ ಗ್ರಾಮದ ಛತ್ರದಲ್ಲಿ ನಿಲ್ಲದೆಯೇ ಮುಂದೆ ಹೋಗಿ ಬಿಟ್ಟರೆ, ಯಾರಿಗೇನೂ ಗೊತ್ತಾಗುವಂತಿಲ್ಲ. ತನಗೆ ಅದೃಷ್ಟವಶಾತ್ ಲಾಭ ತಾನೇ!

ಸಾವುಕಾರನು ಹೀಗೆ ಆಲೋಚಿಸಿ, ಕುದುರೆ ಯನ್ನು ಹಿಂದಕ್ಕೆ ತಿರುಗಿಸಿ ರಸೂಲನ ಬಳಿಗೆ ಬರ ತೊಡಗಿದನು.

ಅದೇ ಸಮಯದಲ್ಲಿ ರಸೂಲ್ ಕೂಡಾ ಆಲೋ ಚನೆಗೆ ಬಿದ್ದಿದ್ದನು. ತಾನೊಬ್ಬ ದೊಡ್ಡ ಬುದ್ಧಿಗೇಡಿ ಯಾಗಿರಬೇಕು. ಹಾಗಿಲ್ಲದಿದ್ದರೆ ಹತ್ತು ವರ್ಷಗಳ ವರೆಗೆ ಎಷ್ಟೋ ಕಷ್ಟಗಳನ್ನು ಸಹಿಸಿ ಸಂಪಾದಿಸಿದ ಹಣದ ಮೂಟೆಯನ್ನು ಮೂಗು ಮೋರೆ ತಿಳಿಯದ ಯಾವನ ಕೈಗೋ ಕೊಡಲು ನೋಡಿದೆ! ಒಂದುವೇಳೆ ಅವನು ದುರಾಶೆ ಹಿಡಿದವನಾಗಿ ಮೂಟೆಯೊಂದಿಗೆ ಓಡಿಹೋದರೆ ತನ್ನಿಂದೇನು ಮಾಡಲು ಸಾಧ್ಯವಿತ್ತು? ಹತ್ತುವರ್ಷ ರಾತ್ರಿ ಹಗಲೆನ್ನದೆ ಬೆವರು ಸುರಿಸಿ ಸಂಪಾದಿಸಿದ ಹಣವನ್ನು ಇನ್ನು ಕೆಲವು ಗಂಟೆಗಳ ವರೆಗೆ ಹೊರಲು ತನಗೆ ಸಾಧ್ಯವಿಲ್ಲವೆಂದರೇನು?

ಹೀಗೆ ರಸೂಲ್ ಆಲೋಚಿಸಿಕೊಂಡಿರುವಾಗಲೇ ಸವಾರನು ಅವನ ಬಳಿಗೆ ಬಂದು, "ಮಿತ್ರಾ! ನೀನು ಕೇಳಿದ ಸಹಾಯವನ್ನು ಮತ್ತೊಮ್ಮೆ ಆಲೋಚನೆ ಮಾಡಿ ನೋಡಿದೆ. ನಿನಗೆ ಸಹಾಯ ಮಾಡ ಬೇಕಾದುದೇ ಧರ್ಮವೆಂದು ಆಗ ಗೊತ್ತಾಯಿತು. ಸರಿ. ಆ ಮೂಟೆಯನ್ನು ಇತ್ತ ಕೊಡು" ಎಂದನು.

ರಸೂಲ್ ಕೂಡಲೇ "ಅಯ್ಯಾ ಮಿತ್ರಾ! ನಾನೂ ಮತ್ತೊಂದು ಸಾರಿ ಆಲೋಚನೆ ಮಾಡಿ ನೋಡಿದೆ. ನನ್ನ ಮೂಟೆಯನ್ನು ನಾನು ಹೊತ್ತುಕೊಂಡು ಹೋಗುವುದೇ ಕ್ಷೇಮವೆಂದೂ, ಉತ್ತಮ ಧರ್ಮ ವೆಂದೂ ಗೊತ್ತಾಯಿತು. ನಾನು ಸ್ವಲ್ಪ ಅವಸರ ಪಟ್ಟೆ, ನೀವು ಸ್ವಲ್ಪ ತಡಮಾಡಿದಿರಿ." ಎಂದನು ಮುಗುಳು ನಗುತ್ತ.

ಇಬ್ಬರೂ ಒಬ್ಬರ ಮನಸ್ಸಿನಲ್ಲಿರುವುದನ್ನು ಮತ್ತೊಬ್ಬರು ನೋಡಿಕೊಂಡರು. ಸವಾರನು ಮರು ಮಾತೇನೂ ಆಡದೆ ಕುದುರೆಯ ಮೇಲೇರಿಕೊಂಡು ತನ್ನ ಪಾಡಿಗೆ ಹೊರಟು ಹೋದನು

ವಿಶ್ರಾಂತಿ ತೆಗೆದುಕೊಂಡುದರಿಂದ ರಸೂಲನಿಗೆ ಮತ್ತೆ ಮೂಟೆ ಹೊತ್ತು ನಡೆಯುವುದು ದೊಡ್ಡ ಕಷ್ಟವೇನೂ ಆಗಲಿಲ್ಲ.



# ಹೆಚ್ಚಿನ ಬುದ್ಧಿವಂತ

ಶಂಕ್ರಯ್ಯನಿಗೂ ವೆಂಕಟಯ್ಯನಿಗೂ ತಾವಿಬ್ಬರೂ ಒಬ್ಬರಿಗಿಂತ ಒಬ್ಬರು ಹೆಚ್ಚು ಬುದ್ಧಿವಂತರೆಂದು ನಂಬಿಕೆ. ಅವರು ದಿನಾ ಏನೋ ಒಂದನ್ನು ಹಿಡಿದು ವಾದ ಮಾಡಿಕೊಳ್ಳುತ್ತಾ ಇರುವವರು.

ಒಂದುಸಾರಿ ಅವರು ಯಾವುದೋ ಒಂದು ವಿಷಯದಲ್ಲಿ ತನ್ನದೇ ಸರಿಯೆಂದು ತಕರಾರು ಮಾಡುತ್ತ, ದಾರಿಯಲ್ಲಿ ಹೋಗುವ ದಾಸಯ್ಯನನ್ನು ಕರೆದು ತಮ್ಮ ತಕರಾರು ತೀರಿಸುವಂತೆ ಕೇಳಿಕೊಂಡರು.

ಅದಕ್ಕೆ ಅವನು, "ಸರಿ, ನಾನು ನಿಮ್ಮಿಬ್ಬರೊಂದಿಗೆ ಒಂದು ಪ್ರಶ್ನೆ ಕೇಳುತ್ತೇನೆ. ಉತ್ತರ ಕೊಟ್ಟವರು ಹೆಚ್ಚಿಗೆ ಬುದ್ಧಿವಂತ. ಇಬ್ಬರೂ ಹೇಳದೆ ಹೋದರೆ ಇಬ್ಬರೂ ಕಡಿಮೆ ಬುದ್ಧಿಯವರು, ನಾನು ಹೆಚ್ಚಿನ ಬುದ್ಧಿಶಾಲಿ, ಸರಿಯೋ ?" ಎಂದನು.

"ನಾನು ಈ ಪಂಥದಲ್ಲಿ ಸೇರಲಾರೆ" ಎಂದು ವೆಂಕಟಯ್ಯ ಅಲ್ಲಿಂದ ಹೊರಟು ಹೋದನು.

"ನೋಡಿದಿರಾ ? ನಿಮ್ಮಿಬ್ಬರೊಳಗೆ ವೆಂಕಟಯ್ಯನೇ ಬುದ್ಧಿವಂತನು. ನಾನು, ನನಗೂ ತಿಳಿಯದ ಸಿಕ್ಕಿನ ಪ್ರಶ್ನೆ ಕೇಳಿ ನಿಮ್ಮಿಬ್ಬರಿಗಿಂತ ಹೆಚ್ಚಿನ ಬುದ್ಧಿವಂತ ನೆನಿಸಬೇಕೆಂದು ಪಥಕ ಹಾಕಿದರೆ ವೆಂಕಟಯ್ಯ ಅದನ್ನು ಕಂಡು ಹಿಡಿದು ಬಿಟ್ಟ !" ಎಂದನು ದಾಸಯ್ಯ.

ಶಂಕ್ರಯ್ಯ ಕೂಡಲೇ ವೆಂಕಟಯ್ಯನ ಹತ್ತಿರ ಓಡಿ ಹೋಗಿ, "ಆ ದಾಸಯ್ಯ ನೀನೇ ಬುದ್ಧಿವಂತನೆನ್ನುತ್ತಾನೆ" ಎಂದು ನಡೆದ ಸಂಗತಿ ಹೇಳಿದನು.

ವೆಂಕಟಯ್ಯ ಆಶ್ಚರ್ಯದಿಂದ, "ಥಕ್ಕನೆ ನನಗೆ ಹೊಟ್ಟೇ ನೋವು ಬಂತು. ಅದನ್ನು ಹೇಳಲು ಇಷ್ಟವಿಲ್ಲದೆ ಏನೋ ಸುಳ್ಳು ಹೇಳಿ ಬಂದು ಬಿಟ್ಟೆ. ಅದೇ ನನ್ನನ್ನು ಹೆಚ್ಚಿನ ಬುದ್ಧಿವಂತನಾಗುವಂತೆ ಮಾಡಿತು. ಭಲೆ ! ಹೊಟ್ಟೆನೋವೂ ಉಪಕಾರ ಮಾಡುತ್ತದೆಂದಾಯಿತು ! " ಎಂದನು.

"ಅಂತಹ ಹೊಟ್ಟೇ ನೋವು ನನಗೆ ದಿನಾ ಬರುತ್ತೆ. ಆದರೆ ಒಳ್ಳೆಯ ಸಮಯದಲ್ಲಿ ಬರುವುದಿಲ್ಲ. ಇದಕ್ಕೆ ಮೊದಲು ನಿನ್ನ ಬದಲಾಗಿ ನನಗೆ ಹೊಟ್ಟೆ ನೋವು ಬಂದಿದ್ದರೆ ದಾಸಯ್ಯನಿಂದ ನಾನೇ ಹೆಚ್ಚಿನ ಬುದ್ಧಿವಂತನೆಂದು ಹೇಳಿಸಿಕೊಳ್ಳುತ್ತಿದ್ದೆ !" ಎಂದು ತಳಮಳಿಸಿದನು ಶಂಕ್ರಯ್ಯ.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೫ ಮಾರ್ಚಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



Pranlal K. Patel



Anant Desai

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಜನವರಿ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ನವೆಂಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಭಲೇ! ನನಗೆ ಬೇಕಾದ್ದೆಲ್ಲಾ ಇಲ್ಲಿದೆ!

ಎರಡನೇ ಫೋಟೋ : ಆಹ! ನನಗೆ ಬೇಕಾದ್ದೆಲ್ಲಾ ಈ ಪುಸ್ತಕದಲ್ಲಿದೆ!

ಕಳುಹಿಸಿದವರು : ಶ್ರೀಮತಿ ಬಿ. ಸರಸ್ವತಿ, ಕಿನ್ನಿಗೋಳಿ, ದಕ್ಷಿಣ ಕನ್ನಡ

ಬಹುಮಾನ ರೂ. ೫೦/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಫರ್ಡಿನಾಂಡ್ ಮೆಗಲನ್. ೨. ಜಾವಾಟ್ರೆಂಚ್. ೩. ಪಾಕ್‌ಜಲಸಂಧಿ. ೪. ದಕ್ಷಿಣ ಅಮೆರಿಕಾ ದೊಳಗಿನ ಅಮೆಜಾನ್ ನದಿ. ೫. ಟೈಬರ್ ನದಿ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, . Arcot Road, Madras-600 026 (India). Controlling Editor: NAGI REDDI.